

ಕಾಯಕವೇ ಕೈಲಾಸ

# ಸಿದ್ಧಗಂಗಾ



ಗುರುವಂದನಾ ಸಂಚಿಕೆ

ಸಂಪುಟ : ೪೮ ಜುಲೈ ೨೦೧೨ ಸಂಚಿಕೆ : ೦೭

ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಯು.ಪಿ.ಎ. ಮತ್ತು ಅಖಿಲ ಭಾರತ ಕಾಂಗ್ರೆಸ್ ಸಮಿತಿ ಅಧ್ಯಕ್ಷೆ ಶ್ರೀಮತಿ ಸೋನಿಯಾ ಗಾಂಧಿಯವರು ವಿದ್ಯುತ್ ಗುಂಡಿಯನ್ನು ಒತ್ತುವುದರ ಮೂಲಕ 105 ದೀಪಗಳನ್ನು ಬೆಳಗಿಸಿ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಸುತ್ತೂರು ಜಗದ್ಗುರುಗಳು, ಆದಿಚುಂಚನಗಿರಿ ಜಗದ್ಗುರುಗಳು, ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಉಪಸ್ಥಿತರಿದ್ದರು.




ಶ್ರೀಮತಿ ಸೋನಿಯಾ ಗಾಂಧಿಯವರಿಂದ ಪೂಜ್ಯ ಶ್ರೀ ಶ್ರೀಗಳವರಿಗೆ ಭಕ್ತಿ ಸಮರ್ಪಣೆ

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಂದ ಪ್ರಸಾದವಾಣಿ

ಶ್ರೀಮತಿ ಸೋನಿಯಾ ಗಾಂಧಿಯವರಿಗೆ ಪೂಜ್ಯ ಶ್ರೀ ಶ್ರೀಗಳವರಿಂದ ಗೌರವ ಸಮರ್ಪಣೆ

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು :
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ - 572 104.

ವಿಳಾಸ :
"ಸಂಪಾದಕರು",
'ಸಿದ್ಧಗಂಗಾ ಮಾಸಪತ್ರಿಕೆ'
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ - 572 104

ಛಾಯಾ ಚಿತ್ರಗಳು : ಬಿ.ಸಿ. ಸುರೇಶ್

ಮುದ್ರಕರು :
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಪ್ರಿಂಟಿಂಗ್ ಪ್ರೊಸೆಸ್
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ - 572 104.
ದೂರವಾಣಿ : 572104-2280055

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ

॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೮ ಜುಲೈ ೨೦೧೨ ಸಂಚಿಕೆ : ೭

## ಒಳಪುಟಗಳಲ್ಲಿ ....................



ಚಂದಾ ವಿವರ :
ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿಗಳು ರೂ. ೧೦/-

## ಗುರುವಂದನಾ



ಎಲ್ಲರಿಗೆ ನಮಸ್ಕಾರ,

**ಪ**ರಮಪೂಜ್ಯ ಶ್ರೀ ಶ್ರೀಗಳವರ ೧೦೪ನೇ ಜನ್ಮದಿನೋತ್ಸವ ೨೮.೪.೨೦೧೧ ರಂದು ಶ್ರೀಮಠದಲ್ಲಿ ಆಯೋಜಿತವಾಗಿತ್ತು. ರಾಜ್ಯದ ಎಲ್ಲ ಕಡೆ ಬರಗಾಲ ಕಾಣಬಂದುದರಿಂದಾಗಿ ಸಮಾರಂಭವನ್ನು ಮಾಡುವುದೇ ಬೇಡ ಎಂಬ ಅಭಿಪ್ರಾಯ ಶ್ರೀಗಳವರದಾಗಿತ್ತು. ಆದರೆ ಭಕ್ತಾದಿಗಳ ಒತ್ತಾಯದಿಂದಾಗಿ ಒಂದು ದಿನದ ಆಚರಣೆ ಸಾಕು ಎಂದು ನಿರ್ಣಯಿಸಲಾಯಿತು. ಅದರಂತೆ ಜನ್ಮದಿನೋತ್ಸವ ನಡೆಯಿತು.

ಅಖಿಲ ಭಾರತ ಕಾಂಗ್ರೆಸ್‌ನ ಅಧ್ಯಕ್ಷರಾದ ಶ್ರೀಮತಿ ಸೋನಿಯಾ ಗಾಂಧಿಯವರು ಕಾರ್ಯಕ್ರಮವನ್ನು ಉದ್ಘಾಟಿಸಿ 'ಎಲ್ಲರಿಗೂ ನಮಸ್ಕಾರ' ಎಂದು ಕನ್ನಡದಲ್ಲಿ ಮಾತನಾಡಲು ಆರಂಭಿಸಿ, ಶ್ರೀಗಳವರ ಸೇವೆಯನ್ನು ಪ್ರಶಂಸಿದರು. ಪರಮಪೂಜ್ಯ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶೀಕೇಂದ್ರ ಮಹಾಸ್ವಾಮಿಗಳು ಅಧ್ಯಕ್ಷತೆ ವಹಿಸಿದ್ದರು. ಪರಮಪೂಜ್ಯ ಜಗದ್ಗುರು ಡಾ॥ ಶ್ರೀ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳು ಉಪಸ್ಥಿತರಿದ್ದು ಆಶೀರ್ವಚನ ನೀಡಿದರು. ಶ್ರೀಮಠದ ಅಧ್ಯಕ್ಷರಾದ, ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಭಕ್ತಿ ಸಮರ್ಪಣೆ ಮಾಡಿದರು. ಶಿಸ್ತು, ಸಂಯಮಗಳ ಸಭೆ ಎಲ್ಲರಿಗೂ ಉದಾಹರಣೆಯಾಯಿತು.

ಮಧ್ಯಾಹ್ನ ನಡೆದ ಧಾರ್ಮಿಕ ಸಮ್ಮೇಳನ 'ಸ್ವಧರ್ಮದಲ್ಲಿ ಶ್ರದ್ಧೆ – ಇತರ ಧರ್ಮಗಳ ಬಗ್ಗೆ ಗೌರವ'ದ ಕುರಿತು ನಡೆಯಿತು. 'ಅನುಭಾವಪಥ', 'ಯುಗಗಂಗಾ' ಗ್ರಂಥಗಳ ಬಿಡುಗಡೆಯನ್ನು ಪೂಜ್ಯ ಶ್ರೀ ಜಗದ್ಗುರು ಶ್ರೀ ಶ್ರೀ ಪಂಚಮಶಿವಲಿಂಗೇಶ್ವರ ಮಹಾಸ್ವಾಮಿಗಳು ನಿಡಸೋಸಿಯ ಶ್ರೀ ಜಗದ್ಗುರು ದುರದುಂಡೀಶ್ವರ ಸಂಸ್ಥಾನಮಠ ಅವರು ಮತ್ತು ಪೂಜ್ಯಶ್ರೀ ಶ್ರೀ ಶಿವಾನುಭವ ಚರಮೂರ್ತಿ ಶಿವರುದ್ರ ಮಹಾಸ್ವಾಮಿಗಳು, ಬೇಲಿಮಠ, ಬೆಂಗಳೂರು ಮಾಡಿಕೊಟ್ಟರು.

ಶ್ರೀಮಠದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದಿಂದ ನೀಡುತ್ತಿರುವ 'ಸಿದ್ಧಗಂಗಾಶ್ರೀ' ಪ್ರಶಸ್ತಿಯನ್ನು ಕರ್ನಾಟಕರತ್ನ, ನಾಡೋಜ ಡಾ॥ ದೇ. ಜವರೇಗೌಡರು, ನಿವೃತ್ತ ಕುಲಪತಿಗಳು, ಮೈಸೂರು ಅವರಿಗೆ ಕೊಡಲಾಯಿತು.

ಸನ್ಮಾನಿತರುಗಳಾದ ಶ್ರೀ ಅರವಿಂದ ಜತ್ತಿ, ಡಾ॥ ಮುಮ್ತಾಜ್ ಅಹಮದ್‌ಖಾನ್, ರೆವೆರೆಂಡ್ ಡಾ॥ ಮನೋಹರ್ ಚಂದ್ರಪ್ರಸಾದ್, ಡಾ॥ ಬಸವರಾಜ ಜಗಜಂಪಿ, ಅವರು ವಿವಿಧ ಧರ್ಮಗಳನ್ನು ಕುರಿತು ಉಪನ್ಯಾಸ ನೀಡಿದರು.

ಬೆಂಗಳೂರು ದೂರದರ್ಶನ ಕೇಂದ್ರದ ಉಪಮಹಾನಿರ್ದೇಶಕರಾದ ಡಾ॥ ಮಹೇಶ್‌ಜೋಷಿ, ಎಂ.ಎಸ್.ಐ.ಎಲ್. ಅಧ್ಯಕ್ಷರಾದ ಸನ್ಮಾನ್ಯ ಶ್ರೀ ವಿಕ್ರಂ ವಿ. ಪಾಟೀಲ್, ಜನಪದ ಗಾಯಕರಾದ ಡಾ॥ ಬಾನಂದೂರು ಕೆಂಪಯ್ಯನವರುಗಳನ್ನು ಸಮಾರಂಭದಲ್ಲಿ ಸನ್ಮಾಯಿಸಲಾಯಿತು.

ಸಿದ್ಧಗಂಗಾ ಶ್ರೀಗಳು 'ವಿಶ್ವರತ್ನ'ರು ಎಂದು ಅಧ್ಯಕ್ಷತೆ ವಹಿಸಿದ್ದ ಪಾವಗಡ ರಾಮಕೃಷ್ಣ ವಿವೇಕಾನಂದಾಶ್ರಮದ ಅಧ್ಯಕ್ಷರಾದ ಪೂಜ್ಯ ಶ್ರೀ ಶ್ರೀ ಜಪಾನಂದ ಮಹಾಸ್ವಾಮಿಗಳು ಭಕ್ತಿ ನುಡಿಗಳನ್ನಾಡಿದ್ದು ಸಭೆಯ ಸಂತೋಷವನ್ನು ನೂರ್ಮಡಿಸಿತು.

ದಿವ್ಯ ಸಾನ್ನಿಧ್ಯದಿಂದ ಪರಮಪೂಜ್ಯ ಶ್ರೀ ಶ್ರೀಗಳವರು ಆಶೀರ್ವಚನ ನೀಡಿದರು.

ಸಾಂಸ್ಕೃತಿಕ ಕಾರ್ಯಕ್ರಮಗಳೊಂದಿಗೆ ಸಮಾರಂಭ ಮುಕ್ತಾಯವಾಯಿತು.

"ಉಂಡು ತೇಗಿತು ಲೋಕ ಕೊಂಡಾಡಿ ದಾಸೋಹ" ೧೦೪ನೇ ಜನ್ಮ ದಿನೋತ್ಸವದ ಸಂಕ್ಷಿಪ್ತ ವರದಿ ರೂಪದ ಈ ಸಂಚಿಕೆಯನ್ನು ನಿಮಗಾಗಿ ನೀಡಲು ಸಂತೋಷಿಸುತ್ತೇವೆ.

– ಸಂಪಾದಕ





## ನೈತಿಕ ಅಧಃಪತನ



ನೈತಿಕ ಅಧಃಪತನ ಎಲ್ಲೆಲ್ಲೂ ಎಲ್ಲ ಕ್ಷೇತ್ರಗಳಲ್ಲೂ ತಾಂಡವವಾಡುತ್ತಿದೆ. ಹಗಲುಹೊತ್ತು ಪಂಜು ಹಿಡಿದುಕೊಂಡು ಹುಡುಕುವ ಸ್ಥಿತಿ ನಿರ್ಮಾಣವಾಗಿದೆ. ***'ಏರಿ ನೀರುಣ್ಣೊಡೆ, ಬೇಲಿ ಬೆಳೆಯ ಮೇವೊಡೆ'*** ಎನ್ನುವಂತಾಗಿವೆ. ಜನ ದಾರಿತಪ್ಪುತ್ತಿದ್ದಾರೆ. ಅದಕ್ಕೆ ಕಾರಣ ಆಳುವವರಾಗಿದ್ದಾರೆ. ಸ್ವಾರ್ಥಕ್ಕೆ ಮಿತಿಯಿಲ್ಲದಂತಾಗಿದೆ. ಕೋಟಿ ಕೋಟಿ ಸಂಪತ್ತಿನ ಒಡೆಯರಾಗುತ್ತಿದ್ದರೂ ದಾಹ ಹೆಚ್ಚುತ್ತಲೇ ಇದೆ. ಅಧಿಕಾರದ ದಾಹ ಮಾನವೀಯತೆಯನ್ನು ದಹಿಸುತ್ತಿದೆ. ***'ಬಡವರ ಬಗ್ಗರ'*** ಗೋಳನ್ನು ಕೇಳುವವರೇ ಇಲ್ಲವಾಗಿದೆ, ಕರ್ತವ್ಯಪ್ರಜ್ಞೆ ಯಾರಲ್ಲೂ ಕಾಣುತ್ತಿಲ್ಲ. ಹಕ್ಕಿಗಾಗಿ ಹೋರಾಡುವವರೇ ಹೆಚ್ಚಾಗಿದ್ದಾರೆ. ಸ್ಥಾನಗೌರವ ಕ್ಷೀಣವಾಗುತ್ತಿದೆ. ಎಲ್ಲರಿಗೂ ಆರಾಮ ಜೀವನ ಬೇಕಾಗಿದೆ. ದುಡಿಮೆಯತ್ತ ಶ್ರದ್ಧೆಯಿಲ್ಲ; ಪ್ರಾಮಾಣಿಕತೆ ಇಲ್ಲ, ನಿಷ್ಠೆ ಹೇಳುವಂತಿಲ್ಲ. ***'ಅಲ್ಪ ಶ್ರಮ ಅಧಿಕ ಲಾಭ'*** ವೇ ಎಲ್ಲರ ಧ್ಯೇಯವಾಗುತ್ತಿದೆ. ರೈತ ಭೂಮಿಯನ್ನು ಹಸನುಮಾಡುವಲ್ಲಿ ಆಸಕ್ತಿ ಕಳೆದುಕೊಳ್ಳುತ್ತಿದ್ದಾನೆ. ವರ್ತಕ ಹೆಚ್ಚು ಲಾಭಗಳಿಸಬೇಕೆಂಬ ದುರಾಶೆಯಿಂದ ಕಳಪೆ ಮಾಡುವತ್ತ ಚಿಂತಿಸುತ್ತಿದ್ದಾನೆ. ಉದ್ಯಮಿ ಹಸನು ಉತ್ಪಾದನೆಗಿಂತ ಅಗ್ಗದ ಉತ್ಪಾದನೆಯತ್ತ ನಡೆದಿದ್ದಾನೆ. ಶಿಕ್ಷಕ ಅಧ್ಯಯನಶೀಲನಾಗುತ್ತಿಲ್ಲ. ವಿದ್ಯಾರ್ಥಿ ಅಭ್ಯಾಸಮುಖಿಯಾಗಿಲ್ಲ. ನೌಕರರಶಾಹಿ ಸವಲತ್ತುಗಳಿಗಾಗಿ ಚಿಂತನೆ ನಡೆಸಿದ್ದಾನೆ. ಅಧಿಕಾರಿ ಐಷಾರಾಮಿಯಾಗುತ್ತಿದ್ದಾನೆ. ಜನಪ್ರತಿನಿಧಿ ಜನರನ್ನು ಕುರಿತು ಚಿಂತನೆ ನಡೆಸುವುದಕ್ಕಿಂತ ತನ್ನ ಅಭಿವೃದ್ಧಿ ಯೋಜನೆ ರೂಪಿಸುತ್ತಿದ್ದಾನೆ. ಹಗರಣಗಳು, ಹೆಚ್ಚಾಗುತ್ತಿವೆ. ದೇಶ ಪ್ರೇಮ ಕೇಳುವಂತಿಲ್ಲ. ***'ತೋಟ ಶೃಂಗಾರ ಒಳಗೆ ಗೋಣಿಸೊಪ್ಪು'*** ಎಂಬಂತಾಗಿದೆ. ಆತ್ಮವಂಚನೆ, ಆಧ್ಯಾತ್ಮಿಕತೆ, ದೇವಪೂಜೆ, ಪ್ರಾರ್ಥನೆಗಳಿಗಿಂತ ಕೀರ್ತಿವಾರ್ತೆ, ಲೌಕಿಕತೆಗಳೇ ಧರ್ಮ ಪೀಠಗಳು ಸೇವಾ ಸಂಸ್ಥೆಗಳ ಗುರಿಯಾಗಿದೆ. ***'ಬೆಲ್ಲದಂತ ಮಾತನಾಡಿ ಎಲ್ಲರನ್ನು ಮರಳುಮಾಡಿ'*** ಬಾಳುವುದೇ ಎಲ್ಲೆಲ್ಲೂ ಕಾಣಬರುತ್ತಿದೆ. ಯಾವ ವರ್ಗದ ಜನರಾದರೂ ನೈತಿಕ ಸಂಪನ್ನತೆಯ ಕಡೆಗೆ ಗಮನ ಕೊಡದ ಚಿತ್ರಣವೇ ಎದ್ದು ಕಾಣುತ್ತಿದೆ. ***"ಧರೆ ಹೊತ್ತಿ ಉರಿಯುವಂತಾಗಿದೆ."*** ಯಾರಿಗೆ ದೂರುವುದು? ಯಾರನ್ನು ಕೇಳುವುದು? ಆತ್ಮ ಪರೀಕ್ಷೆಯೊಂದೇ ಬೇಕಾಗಿರುವುದು.



## ಶ್ರೀ ಸಿದ್ಧಲಿಂಗೇಶ್ವರ ವಚನ



ಅಂದಾದಿಬಿಂದು ಉದಯಿಸದಂದು ಮಾಯಶಕ್ತಿ ಹುಟ್ಟದಂದು
ಪರಶಿವತತ್ವದಲ್ಲಿ ಚಿತ್ತು ತಲೆದೋರದಂದು
ಚಿತ್ತುವಿನಿಂದ ನಾದ ಬಿಂದು ಕಳೆಗಳುದಯವಾಗದಂದು
ನಾದಬಿಂದುವೊಂದಾಗಿ ಚಿತ್ಪಿಂಡರೂಹಿಸದಂದು
ಶೂನ್ಯ ಮಹಾಶೂನ್ಯವಿಲ್ಲದಂದು ನೀಕಳ ನಿರಾಳತತ್ವವೆಂಬ ಹೆಸರಿಲ್ಲದಂದು
ನಿತ್ಯನಿರಂಜನ ನೀನೊಬ್ಬನೇ ಇದ್ದಿಯಲ್ಲ ನಿನ್ನ ನೀನರಿಯದೆ
ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೇ

ನಿಷ್ಕಲ ಬ್ರಹ್ಮದಲ್ಲಿ ಜ್ಞಾನಚಿತ್ತು ಕುರುಹು ಕಾಣಿಸಿಕೊಳ್ಳುವುದಕ್ಕಿಂತ ಮೊದಲೆ ಜ್ಞಾನಚಿತ್ತುವಿನಿಂದ ಚಿನ್ನಾದ ಚಿದ್ಬಿಂದು ಚಿತ್ಕಳೆಗಳು ಉತ್ಪತ್ಯವಾಗದಕ್ಕಿಂತ ಮೊದಲೆ ಆ ಚಿನ್ನಾದ ಚಿದ್ಬಿಂದು ಚಿತ್ಕಳೆಗಳು ಏಕವಾಗಿ ಅಖಂಡ ಗೋಳಾಕಾರವೇ ಜೋಮೂರ್ತಿಯಪ್ಪ ಮಹಾಲಿಂಗವು ಕುರುಹುಗಾಣಿಸಿಕೊಳ್ಳುವುದಕ್ಕಿಂತ ಮೊದಲೆ ಚಿತ್ಪಿಂಡದಿಂದ ಅಂದಾದಿಬಿಂದು ಪರಾಶಕ್ತಿಯು ಉತ್ಪತ್ಯವಾಗದಕ್ಕಿಂತ ಮೊದಲೆ ಆ ಪರಾಶಕ್ತಿಯಿಂದ ಅವಿದ್ಯಾಶಕ್ತಿಯು ಉತ್ಪತ್ಯವಾಗದಕ್ಕಿಂತ ಮೊದಲೆ ಆ ಮಾಯಾ ಶಕ್ತಿಯಿಂಗೆ ಶೂನ್ಯ ಮಹಾಶೂನ್ಯ ಜೀವಪ್ರಾಣಂಗಳು ಉಂಟಾಗದಕ್ಕಿಂತ ಮೊದಲೆ ಷಟ್ಕಲೆಗಳಿಗೆ ಮೀರಿ ತೋರಲ್ಪಟ್ಟ ಆಳವ ಕಾಣಿಸಿಕೊಳ್ಳಬಾರದ ಬ್ರಹ್ಮವೆಂಬ ಅಭಿಧಾನ ಉಂಟಾಗದಕ್ಕಿಂಥಾ ಮೊದಲೆ ಶಾಶ್ವತ ಸ್ವರೂಪವಾದಂಥ ಮಾಯಾರಂಜನೆಗೆ ಬಾರದಿರ್ದಂಥ ನೀನೋರ್ವನೆಯಾಗಿ ಏಕದೇಹಿ ಮಾತ್ರವಾಗಿ ಬಯಲಿಗನಾಗಿ ಒಪ್ಪುತಿರ್ದಿಯಲ್ಲಾ ನಿನ್ನ ನೀ ತಿಳಿಯದೆ ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೆ.

[ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನ ಸಾರಾಮೃತದ ಬೆಡಗಿನ ವಚನದ ಟೀಕೆ - ವೀರಶೈವ ಅಧ್ಯಯನ ಸಂಸ್ಥೆ - ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ - ಡಂಬಳ - ಗದಗ]

**ಶ್ರೀವಾಣಿ**

ಜೀವನದಲ್ಲಿ ಆಚರಿಸುವ ಅನೇಕ ಆಚರಣೆಗಳ ಅಂತರಾರ್ಥ ಅರಿವಿನಿಂದ ಮುನ್ನಡೆಯುವುದಕ್ಕಾಗಿವೆ. ಆಚರಣೆಗಳು ಆಡಂಬರದ ಉತ್ಸವಗಳಾಗಬಾರದು. ನಮ್ಮ ನಡೆ-ನುಡಿಯನ್ನು ತಿದ್ದಿಕೊಳ್ಳುವ ಸಾಣೆ ಶ್ರೀಗಂಧದಂತಾಗಬೇಕು.

## ಶ್ರೀ ಸಿದ್ಧಗಂಗಾ ಗುರು ಕರುಣ ತ್ರಿವಿಧಿ

ನಿಜವನಾರರಿಯರು ನಿಮ್ಮ ದಾಸೋಹದ
ನಿಮ್ಮನಾರಿಯೆ ನಿಜದೊಳು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಯಲಲೊದಗಿದ ಘಟಿಕೆ ಬಯಲನಾಧಾರಮಾಡಿ
ಬಯಲ ಮೂರುತಿಯಾಗಿ ಬೆಳಗಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೊರಗೆ ಆಕಾರಧರಿಸಿ ಒಳಗೆ ನಿರವಯ ಕುಣಿಸಿ
ಇರಗೆ ಲೀಲೆಯ ನಡೆಸಿ ಒಡನಿಡುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಕುತಿಯ ಶಕುತಿಯೆ ಜ್ಞಾನದ ನಿಲುಕಡೆಯೆ
ಸೇವೆಯ ಶಿವ ಸಿರಿಗಂಧವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ರೂಪ ಶ್ರೀಮಂತವೆ ಭಾವ ಬಂಗಾರವೆ
ಸಿರಿಮನಮಾನವ್ಯ ಮಂಗಳವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗ ಲೀಲಾಮೂರ್ತಿ ಕಂಗಳ ಕೈಲಾಸ
ಮಂಗಳ ಮನವ ಮಡಿಗೈವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೆಳಲಿಲ್ಲದ ಶ್ರೀ ನಡೆಯೆ ಅಳವಿಲ್ಲದ ಶ್ರೀಸೇವೆ
ಇನ್ನೆಲ್ಲೂ ಕಾಣದ ವಿಭೂತಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಚಾರವರಿಯದೆ ಅರೆಮರುಳನಾಗಿರುವೆ
ಶಿವಸುಖ ಬಯಸಿಬಾಯಾರಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗಿಡಮರ ತಲೆದೂಗಿ ತಂಗಾಳಿಗೆ ನಲಿವಂತೆ
ಇಡಿಲೋಕ ತಲೆಬಾಗಿ ತವಪದದಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆತ್ಮಸ್ತುತಿ ಬಿಡು ಎಂದೆ ಪರನಿಂದೆ ಬೇಕೆಂದೆ
ವಿನಯ ಸೌಜನ್ಯಗಳ ಕಲಿಯೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ





॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಶ್ರೀ ಸಿದ್ಧಗಂಗಾ ಮಠದ, ಕರ್ನಾಟಕ ರತ್ನ, ತ್ರಿವಿಧ ದಾಸೋಹ ಜ್ಯೋತಿ
ಪರಮಪೂಜ್ಯ ಶ್ರೀ ಮ.ನಿ.ಪ್ರ.ಸ್ವ

# ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ

# 105ನೇ ಜನ್ಮದಿನೋತ್ಸವ ಹಾಗೂ ಗುರುವಂದನಾ ಮಹೋತ್ಸವ

**ದಿನಾಂಕ 28-4-2012, ಶನಿವಾರ**



ಅ ಆ

ಟಿಪ್ಪಣಿ: ಅ - ಅನ್ನ, ಅರಿವು, ಅಕ್ಷರ    ಆ - ಆಸರೆ.

ಭಕ್ತ ಮಂಡಳಿ, ಶ್ರೀ ಸಿದ್ಧಗಂಗಾ ಕ್ಷೇತ್ರ, ತುಮಕೂರು ಜಿಲ್ಲೆ

॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಶ್ರೀ ಸಿದ್ಧಗಂಗಾ ಮಠದ, ಕರ್ನಾಟಕರತ್ನ, ತ್ರಿವಿಧ ದಾಸೋಹಜ್ಯೋತಿ,
ಶ್ರೀ.ಮ.ನಿ.ಪ್ರ.ಸ್ವ. ಪರಮಪೂಜ್ಯ

# ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ 105ನೇ ಜನ್ಮದಿನೋತ್ಸವ ಹಾಗೂ ಗುರುವಂದನಾ ಮಹೋತ್ಸವ

**ದಿನಾಂಕ 28-04-2012 ಶನಿವಾರ ಬೆಳಿಗ್ಗೆ 11.00 ಗಂಟೆಗೆ**

ಉದ್ಘಾಟನೆ : **ಶ್ರೀಮತಿ ಸೋನಿಯಾ ಗಾಂಧಿ**
ಅಧ್ಯಕ್ಷರು, ಯುಪಿಎ ಮತ್ತು
ಅಖಿಲ ಭಾರತ ಕಾಂಗ್ರೆಸ್ ಸಮಿತಿ.

ದಿವ್ಯಅಧ್ಯಕ್ಷತೆ : ಪರಮಪೂಜ್ಯ ಜಗದ್ಗುರು
**ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು**
ಶ್ರೀ ಸುತ್ತೂರು ವೀರಸಿಂಹಾಸನ ಮಹಾಸಂಸ್ಥಾನ ಮಠ.

ದಿವ್ಯಉಪಸ್ಥಿತಿ : ಪರಮಪೂಜ್ಯ ಜಗದ್ಗುರು
**ಡಾ॥ ಶ್ರೀ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳು**
ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠ.

ಭಕ್ತಿಸಮರ್ಪಣೆ : **ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು**
ಅಧ್ಯಕ್ಷರು, ಶ್ರೀ ಸಿದ್ಧಗಂಗಾಮಠ.

ಟಿಪ್ಪಣಿ: ಅ–ಅನ್ನ, ಅರಿವು, ಅಕ್ಷರ. ಆ–ಆಸರೆ.





# ಧಾರ್ಮಿಕ ಸಮ್ಮೇಳನ

**ವಸ್ತು (Theme) : ಸ್ವಧರ್ಮದಲ್ಲಿ ಶ್ರದ್ಧೆ–ಇತರ ಧರ್ಮಗಳ ಬಗ್ಗೆ ಗೌರವ**
**ದಿನಾಂಕ 28-04-2012 ಶನಿವಾರ ಸಮಯ 3.00 ಅಪರಾಹ್ನ**

ದಿವ್ಯಸಾನ್ನಿಧ್ಯ : ಕರ್ನಾಟಕರತ್ನ, ಪರಮಪೂಜ್ಯ
**ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು**
ಶ್ರೀ ಸಿದ್ಧಗಂಗಾಮಠ.

ದಿವ್ಯಅಧ್ಯಕ್ಷತೆ : **ಪೂಜ್ಯ ಶ್ರೀ ಶ್ರೀ ಜಪಾನಂದ ಮಹಾಸ್ವಾಮಿಗಳು**
ರಾಮಕೃಷ್ಣಾಶ್ರಮ, ಪಾವಗಡ.

'ಅನುಭಾವಪಥ' ಗ್ರಂಥ ಬಿಡುಗಡೆ : ಪೂಜ್ಯ ಶ್ರೀ ಜಗದ್ಗುರು
**ಶ್ರೀ ಶ್ರೀ ಪಂಚಮಶಿವಲಿಂಗೇಶ್ವರ ಮಹಾಸ್ವಾಮಿಗಳು**
ಶ್ರೀ ಜಗದ್ಗುರು ದುರದುಂಡೀಶ್ವರ ಸಂಸ್ಥಾನಮಠ,
ನಿಡಸೋಸಿ.

'ಯುಗಗಂಗಾ' ಗ್ರಂಥ ಬಿಡುಗಡೆ : **ಪೂಜ್ಯ ಶ್ರೀ ಶ್ರೀ ಶಿವಾನುಭವ ಚರಮೂರ್ತಿ ಶಿವರುದ್ರ ಮಹಾಸ್ವಾಮಿಗಳು**
ಬೇಲಿಮಠ, ಬೆಂಗಳೂರು.

'ಸಿದ್ಧಗಂಗಾಶ್ರೀ' ಪ್ರಶಸ್ತಿ ಪ್ರದಾನ : **ಕರ್ನಾಟಕ ರತ್ನ, ನಾಡೋಜ ಡಾ॥ ದೇ. ಜವರೇಗೌಡರಿಗೆ**
ನಿವೃತ್ತ ಕುಲಪತಿಗಳು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.
(ಶ್ರೀಮಠದ ಹಳೆಯ ವಿದ್ಯಾರ್ಥಿಗಳ ಮತ್ತು
ಹಿತೈಷಿಗಳ ಸಂಘದ ವತಿಯಿಂದ)

ಟಿಪ್ಪಣಿ: ಅ–ಅನ್ನ, ಅರಿವು, ಅಕ್ಷರ. ಆ–ಆಸರೆ.

ಉಪನ್ಯಾಸ : **ಸನ್ಮಾನ್ಯ ಶ್ರೀ ಅರವಿಂದ ಜತ್ತಿ**
ಅಧ್ಯಕ್ಷರು, ಬಸವ ಸಮಿತಿ, ಬೆಂಗಳೂರು.

**ಡಾ॥ ಮಮ್ತಾಜ್ ಅಹಮದ್ ಖಾನ್**
ಸಂಸ್ಥಾಪಕರು ಮತ್ತು ಅಧ್ಯಕ್ಷರು,
ಅಲ್-ಅಮೀನ್ ಎಜುಕೇಷನಲ್ ಸೊಸೈಟಿ, ಬೆಂಗಳೂರು

**ರೆವೆರೆಂಡ್ ಡಾ॥ ಮನೋಹರ್ ಚಂದ್ರಪ್ರಸಾದ್**
ಪ್ರೆಸ್‌ಬೈಟರ್, ಸಿ.ಎಸ್.ಐ., ಬೆಂಗಳೂರು

**ಡಾ॥ ಬಸವರಾಜ ಜಗಜಂಪಿ**
ನಿವೃತ್ತ ಪ್ರಿನ್ಸಿಪಾಲರು, ಲಿಂಗರಾಜು ಕಾಲೇಜು, ಬೆಳಗಾವಿ.

ಸನ್ಮಾನ : **ಡಾ॥ ಮಹೇಶ್ ಜೋಷಿ**
ಉಪ ಮಹಾನಿರ್ದೇಶಕರು, ದೂರದರ್ಶನ ಕೇಂದ್ರ,
ಬೆಂಗಳೂರು.

**ಸನ್ಮಾನ್ಯ ಶ್ರೀ ವಿಕ್ರಂ ವಿ. ಪಾಟೀಲ್**
ಅಧ್ಯಕ್ಷರು, ಎಂ.ಎಸ್.ಐ.ಎಲ್., ಬೆಂಗಳೂರು.

**ಡಾ॥ ಬಾಣಂದೂರು ಕೆಂಪಯ್ಯ**
ಜನಪದ ಗಾಯಕರು, ಬೆಂಗಳೂರು.

ಸಮಾರಂಭದಲ್ಲಿ ಹರಗುರು ಚರಮೂರ್ತಿಗಳು,
ಗಣ್ಯಮಾನ್ಯರು ಭಾಗವಹಿಸುತ್ತಾರೆ.

ತಾವೂ ಬನ್ನಿ
ಸರ್ವರಿಗೂ ಸುಸ್ವಾಗತ

ಭಕ್ತಮಂಡಳಿ
ಶ್ರೀ ಸಿದ್ಧಗಂಗಾಮಠ

ಟಿಪ್ಪಣಿ: ಅ-ಅನ್ನ, ಅರಿವು, ಅಕ್ಷರ. ಆ-ಆಸರೆ.







# ಸಡಗರ ಸಂಭ್ರಮದ ನಡುವೆ ಗುರುವಂದನೆ

## ಶ್ರೀಮತಿ ಸೋನಿಯಾಗಾಂಧಿ ಅವರಿಂದ ಉದ್ಘಾಟನೆ

**ವರದಿ : ಎಚ್.ಎಸ್. ಸಿದ್ಧಗಂಗಪ್ಪ**
ನಂ. ೧೬೧೭, 'ಮಾತೃಶ್ರೀ' ಸರ್. ಎಂ. ವಿಶ್ವೇಶ್ವರಯ್ಯ
ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು
ಮುದ್ದಿನ ಪಾಳ್ಯ ಮುಖ್ಯರಸ್ತೆ,
ಬೆಂಗಳೂರು - ೫೬೦ ೦೯೧.




ಶ್ರೀಮತಿ ಸೋನಿಯಾಗಾಂಧಿ ಅವರು ವಿದ್ಯುತ್ ಗುಂಡಿಯನ್ನು ಒತ್ತುವುದರ ಮೂಲಕ
೧೦೫ ದೀಪಗಳನ್ನು ಬೆಳಗಿಸಿ ಸಮಾರಂಭಕ್ಕೆ ಚಾಲನೆ ನೀಡಿದರು

ಶ್ರೀ ಸಿದ್ಧಗಂಗಾ ಮಠದಲ್ಲಿ ನಡೆಯುವ ಗುರುವಂದನಾ ಕಾರ್ಯಕ್ರಮವೆಂದರೆ ಆಹ್ವಾನ ಬೇಕಾಗಿಲ್ಲ. ಬಸ್ಸುಗಳನ್ನು ಮಾಡುವ ಅಗತ್ಯವಿಲ್ಲ. ವಿಷಯ ಒಬ್ಬರಿಂದ ಒಬ್ಬರಿಗೆ ಮುಟ್ಟಿದರೆ ಸಾಕು, ಭಕ್ತರು, ಅಭಿಮಾನಿಗಳು ನಾಡಿನ ಮೂಲೆ ಮೂಲೆಗಳಿಂದಲ್ಲದೆ ನೆರೆರಾಜ್ಯಗಳಿಂದ; ಅಷ್ಟೇ ಏಕೆ ವಿದೇಶಗಳಿಂದಲೂ ಹಳೆಯ ವಿದ್ಯಾರ್ಥಿಗಳು ಭಾಗವಹಿಸಿ ಈ ಅಭೂತ ಸಮಾರಂಭಕ್ಕೆ ಸಾಕ್ಷೀಭೂತರಾಗುತ್ತಾರೆ.

ವರ್ಷದಿಂದ ವರ್ಷಕ್ಕೆ ಗುರುವಂದನಾ ಕಾರ್ಯಕ್ರಮ ವಿಶೇಷ ಮಹತ್ವವನ್ನು ಪಡೆದುಕೊಳ್ಳುತ್ತಿದೆ. ಲಕ್ಷೋಪಲಕ್ಷ ಭಕ್ತರು ಸಮಾರಂಭಕ್ಕೆ ಆಗಮಿಸಿ ವೇದಿಕೆಯ ಮೇಲೆ ವಿರಾಜಮಾನರಾಗಿರುವ ತ್ರಿವಿಧ ದಾಸೋಹಿ, ಕಾಯಕ ಯೋಗಿ ನಡೆದಾಡುವ ಮಾತನಾಡುವ ದೇವರೆಂದೇ ಜನಮಾನಸದಲ್ಲಿ ಹಚ್ಚ ಹಸಿರಾಗಿರುವ ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ಕಣ್ಣು ತುಂಬಿಸಿಕೊಂಡು ಧನ್ಯತೆಯನ್ನು ಪಡೆಯುತ್ತಾರೆ.



ಶ್ರೀಮತಿ ಸೋನಿಯಾಗಾಂಧಿಯವರನ್ನು ಪೂರ್ಣಕುಂಭದೊಡನೆ ವೇದಿಕೆಗೆ ಬರಮಾಡಿಕೊಳ್ಳುತ್ತಿರುವುದು

ನೂರಾನಾಲ್ಕು ವಸಂತಗಳನ್ನು ಪೂರೈಸಿ ನೂರಾಐದನೇ ವರ್ಷಕ್ಕೆ ಪದಾರ್ಪಣೆ ಮಾಡುತ್ತಿರುವ ಪೂಜ್ಯಶ್ರೀಗಳವರನ್ನು ನೋಡುವುದೇ ಜೀವನದ ಪುಣ್ಯವಿಶೇಷ.

ಏಪ್ರಿಲ್ ೨೮ರಂದು ಶ್ರೀಮಠದಲ್ಲಿ ನಡೆದ ಅಭೂತಪೂರ್ವ ಸಮಾರಂಭಕ್ಕೆ ಭಕ್ತಸಾಗರವೇ ಹರಿದು ಬಂದಿತ್ತು. ಈ ಸಲ ನಡೆದ ಗುರುವಂದನಾ ಸಮಾರಂಭ ಹಲವು ವಿಷಯಗಳಲ್ಲಿ ವೈಶಿಷ್ಟ್ಯದಿಂದ ಕೂಡಿತ್ತು. ಯುಪಿಎ ಮತ್ತು ಅಖಿಲಭಾರತ ಕಾಂಗ್ರೆಸ್ ಸಮಿತಿ ಅಧ್ಯಕ್ಷರಾದ ಶ್ರೀಮತಿ ಸೋನಿಯಾ ಗಾಂಧಿಯವರನ್ನು ಹೊರತುಪಡಿಸಿ ರಾಜ್ಯ ಹಾಗೂ ಕೇಂದ್ರ ಸರ್ಕಾರಗಳ ಸಚಿವರಾಗಲಿ, ರಾಜ್ಯಪಾಲರಾಗಲಿ, ಮುಖ್ಯಮಂತ್ರಿಗಳು, ವಿರೋಧಪಕ್ಷದ ನಾಯಕರು, ಸಂಸದರು, ವಿಧಾನಸಭಾ ಹಾಗೂ ವಿಧಾನ ಪರಿಷತ್ ಸದಸ್ಯರಿಗಾಗಲಿ ವೇದಿಕೆಯಲ್ಲಿ ಅವಕಾಶವಿರಲಿಲ್ಲ. ರಾಜಕಾರಣಿಗಳಿಗೂ ವೇದಿಕೆಯ ಮೇಲೆ ಅವಕಾಶವಿರಲಿಲ್ಲ. ಬಹುಶಃ ಶ್ರೀಮಠದಲ್ಲಿ ನಡೆದ ಗುರುವಂದನಾ ಸಮಾರಂಭದ ಇತಿಹಾಸದಲ್ಲೇ ರಾಜ್ಯಪಾಲರು, ಮುಖ್ಯ ಮಂತ್ರಿಗಳು, ಕೇಂದ್ರ ಸಚಿವರು ವೇದಿಕೆಯ ಮೇಲೆ ಇಲ್ಲದೆ ಸಮಾರಂಭ ನಡೆದಿರಲಿಲ್ಲ. ವೇದಿಕೆಯಲ್ಲಿ ಶ್ರೀಮತಿ ಸೋನಿಯಾ ಗಾಂಧಿಯವರು, ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರು, ಸುತ್ತೂರು ಜಗದ್ಗುರು ಪೂಜ್ಯ ಶ್ರೀ ಶ್ರೀ ಶಿವರಾತ್ರಿದೇಶೀಕೇಂದ್ರಮಹಾಸ್ವಾಮಿಗಳು, ಆದಿಚುಂಚನಗಿರಿಯ ಪೂಜ್ಯ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು, ಶ್ರೀಮಠದ ಪೂಜ್ಯಶ್ರೀ ಶ್ರೀ ಸಿದ್ಧಲಿಂಗಮಹಾ ಸ್ವಾಮಿಗಳು ಉಪಸ್ಥಿತರಿದ್ದರು.

ಶ್ರೀಮತಿ ಸೋನಿಯಾ ಗಾಂಧಿಯವರು ಶ್ರೀಮಠಕ್ಕೆ ಬರುವ ಹಿನ್ನಲೆಯಲ್ಲಿ ಭಾರಿ ಬಿಗಿ ಬಂದೋಬಸ್ತ್ ಮಾಡಲಾಗಿತ್ತು. ಪೋಲಿಸರು, ಗುಪ್ತದಳ, ಕಮಾಂಡೋಗಳು ಶ್ರೀಮಠದಲ್ಲಿ ವೇದಿಕೆಯ ಸುತ್ತಮುತ್ತ ಹಾಗೂ ಸೋನಿಯಾ ಗಾಂಧಿ ತುಮಕೂರಿನಿಂದ ಬರುವ ದಾರಿಯ ಇಕ್ಕೆಡೆಗಳಲ್ಲಿ ಕಟ್ಟೆಚ್ಚರ ವಹಿಸಿದ್ದರು. ಸದಾ ಭಕ್ತರಿಂದ ಕೂಡಿರುತ್ತಿದ್ದ ಶ್ರೀಮಠದ ಆವರಣ ಬಿಕೋ ಎನಿಸುತ್ತಿತ್ತು. ಪೂಜ್ಯ ಶ್ರೀಗಳವರ ಆಡಳಿತ ಕಛೇರಿಯಿಂದ ವೇದಿಕೆಯವರಿಗೆ ಶ್ರೀಮತಿ ಸೋನಿಯಾ ಗಾಂಧಿಯವರು ಬರುವಾಗ ಯಾರ ಕಣ್ಣಿಗೂ ಬೀಳದಂತೆ ಭದ್ರತೆಯ ದೃಷ್ಟಿಯಿಂದ ಮುನ್ನೆಚ್ಚರಿಕೆ ವಹಿಸಲಾಗಿತ್ತು.




ಡಾ. ಸಿ. ಜಯಣ್ಣ ಅವರಿಂದ ಸ್ವಾಗತ

ಸಮಾರಂಭಕ್ಕೆ ಶೋಭೆ ತರುವಂತೆ ಸುಸಜ್ಜಿತವಾದ ಎತ್ತರವಾದ ವೇದಿಕೆಯನ್ನು ನಿರ್ಮಿಸಲಾಗಿತ್ತು. ಮಳೆ ಬಂದರೂ ಸಮಾರಂಭಕ್ಕೆ ಅಡಚಣೆಯಾಗದ ರೀತಿಯಲ್ಲಿ ಸಭಾಮಂಟಪವನ್ನು ನಿರ್ಮಿಸಲಾಗಿತ್ತು. ವೇದಿಕೆ ಮುಂಭಾಗದಲ್ಲಿ ಸುಮಾರು ನೂರು ಅಡಿಗಳ ಸುತ್ತಮುತ್ತ ತಡೆಗೋಡೆಯನ್ನು ಭದ್ರತೆಯ ದೃಷ್ಟಿಯಿಂದ ನಿರ್ಮಿಸಲಾಗಿತ್ತು. ವೇದಿಕೆಯ ಎಡಭಾಗಕ್ಕೆ ಸಮಾನಾಂತರವಾಗಿ ಹಾಕಿದ್ದ ಮತ್ತೊಂದು ಚಿಕ್ಕ ವೇದಿಕೆಯಲ್ಲಿ ಕೆಲವೇ ಮಂದಿ ಗಣ್ಯರಿಗೆ ಸ್ಥಳಾವಕಾಶ ಕಲ್ಪಿಸಲಾಗಿತ್ತು.

ಸಭಾಮಂಟಪಕ್ಕೆ ಬರುವ ಪ್ರತಿಯೊಬ್ಬರನ್ನು ಲೋಹ ನಿರೋಧಕ ಬಾಗಿಲಿನಿಂದ ತಪಾಸಣೆ ಮಾಡಿ ಬಿಡಲಾಗುತ್ತಿತ್ತು. ಬ್ಯಾಗುಗಳು, ನೀರಿನಬಾಟಲುಗಳನ್ನು ತೆಗೆದುಕೊಂಡು ಹೋಗಲು ನಿಷೇದಿಸಲಾಗಿತ್ತು.

ಡಾ. ಎಂ.ಎನ್. ಚನ್ನಬಸಪ್ಪ ಅವರಿಂದ ಪ್ರಾಸ್ತಾವಿಕ ನುಡಿ








ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಭಕ್ತಿ ಸಮರ್ಪಣೆ




ಪರಮಪೂಜ್ಯ ಜಗದ್ಗುರು ಡಾ. ಶ್ರೀ ಶ್ರೀ ಬಾಲಗಂಗಾಧರನಾಥ ಮಹಾಸ್ವಾಮಿಗಳವರಿಂದ ನುಡಿ ನಮನ



ಪೂಜ್ಯ ಶ್ರೀ ಶ್ರೀ ಸುತ್ತೂರು ಶಿವರಾತ್ರಿ ದೇಶೀಕೇಂದ್ರ ಮಹಾಸ್ವಾಮಿಗಳವರಿಂದ ನುಡಿ ನಮನ

ಸಭಾಮಂಟಪದ ಬಲಭಾಗದಲ್ಲಿರುವ ಮೈದಾನದಲ್ಲಿ ಷಾಮಿಯಾನ ಹಾಕಿ ಪ್ರೇಕ್ಷಕರು ಕೂರಲು ವ್ಯವಸ್ಥೆ ಮಾಡಲಾಗಿತ್ತು. ಸಮಾರಂಭದ ಕಾರ್ಯಕಲಾಪಗಳು ದೂರದಲ್ಲಿ ಕುಳಿತವರಿಗೂ ಕಾಣುವಂತೆ ದೊಡ್ಡ ಪರದೆಗಳನ್ನು ಅಳವಡಿಸಲಾಗಿತ್ತು. ಹಿಂದಿನ ದಿನ ವರುಣನ ಕೃಪಾದೃಷ್ಟಿಯಿಂದ ವಾತಾವರಣ ಆಹ್ಲಾದಕರವಾಗಿತ್ತು.

ಕಾರ್ಯಕ್ರಮಕ್ಕೆ ಮುನ್ನ ಖ್ಯಾತ ಗಾಯಕ ಹಾಗೂ ಕ್ಲಾರಿನೆಟ್ ವಾದಕ ಶ್ರೀ ನರಸಿಂಹ ವಡವಾಟಿಯವರಿಂದ ವಚನ ಗಾಯನ, ಖ್ಯಾತ ಗಾಯಕಿ ಶ್ರೀಮತಿ ಸಂಗೀತಾ ಕಟ್ಟಿ ಅವರಿಂದ ಸಂಗೀತ ಕಾರ್ಯಕ್ರಮ ನಡೆಯಿತು. ಅವರ ಸಿರಿಕಂಠದಿಂದ ಹೊರಟ ಸಂಗೀತ ಲಹರಿಯಿಂದ ಪ್ರೇಕ್ಷಕರು ಭಾವಲೋಕದಲ್ಲಿ ವಿಹರಿಸಿದರು. ಅಂತ ಅದ್ಭುತವಾದ ಹಾಡುಗಾರಿಕೆ ಜನಮನವನ್ನು ಸೂರೆಗೊಂಡಿತು.

ನಿಗದಿತ ಅವಧಿಗಿಂತ ೪೫ ನಿಮಿಷ ತಡವಾಗಿ ಕಾರ್ಯಕ್ರಮ ಪ್ರಾರಂಭವಾಯಿತು. ಗಣ್ಯ ಅತಿಥಿಗಳನ್ನು ಪೂಜ್ಯ ಶ್ರೀಗಳವರ ಆಡಳಿತ ಕಛೇರಿಯಿಂದ ಮೆರವಣಿಗೆಯೊಂದಿಗೆ ವೇದಿಕೆಗೆ ಬರಮಾಡಿಕೊಳ್ಳಲಾಯಿತು. ಶ್ರೀಮಠದ ವಿದ್ಯಾರ್ಥಿಗಳು **'ನುಡಿದರೆ ಮುತ್ತಿನ ಹಾರದಂತಿರಬೇಕು'** ಬಸವಣ್ಣನವರ ವಚನ ಗಾಯನದೊಂದಿಗೆ ಪ್ರಾರ್ಥನೆ ಮಾಡಿದರು. ಸ್ನೇಹ ಬಳಗದವರಿಂದ **'ವಚನದಲ್ಲಿ ನಾಮಾಮೃತ'** ಮತ್ತು **'ಬಸವ ಬೆಳಕು ಬೆಳಗಲಿ'** ವಚನವನ್ನು ಹಾಡುವುದರ ಮೂಲಕ ಸಮಾರಂಭಕ್ಕೆ ಶುಭ ಕೋರಿದರು.

ಸಮಾರಂಭಕ್ಕೆ ಎಲ್ಲರನ್ನು ಸ್ವಾಗತಿಸಿದವರು ಬೆಂಗಳೂರಿನ ಫನೆಷಿಯಾ ಆಸ್ಪತ್ರೆಯ ವ್ಯವಸ್ಥಾಪಕ ನಿರ್ದೇಶಕರಾದ ಡಾ. ಸಿ. ಜಯಣ್ಣನವರು. ನಂತರ ಶ್ರೀಮತಿ ಸೋನಿಯಾ ಗಾಂಧಿಯವರು ವಿದ್ಯುತ್ ಗುಂಡಿಯನ್ನು ಒತ್ತಿ ೧೦೫ ವಿದ್ಯುತ್ ದೀಪಗಳನ್ನು ಬೆಳಗಿಸುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು.

ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿ ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಡಾ|| ಎಂ.ಎನ್. ಚನ್ನಬಸಪ್ಪ ನವರು ಪ್ರಾಸ್ತಾವಿಕ ನುಡಿಗಳಲ್ಲಿ ಪರಮಪೂಜ್ಯ ಶ್ರೀ ಶ್ರೀಗಳ ಹಿಮಾಲಯ ಸದೃಶ ವ್ಯಕ್ತಿತ್ವವನ್ನು ಕೆಲವೇ ಮಾತುಗಳಲ್ಲಿ ಅರ್ಥಪೂರ್ಣವಾಗಿ ಮಾಡಿಕೊಟ್ಟರು.

ಶ್ರೀಮಠದ ಅಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳು ತಮ್ಮ ಭಕ್ತಿ ಸಮರ್ಪಣೆಯಲ್ಲಿ ನಮ್ಮ ಪೂಜ್ಯ ಗುರುಗಳು ತ್ಯಾಗಜೀವನದ ಪ್ರತಿರೂಪ, ಸಹಸ್ರ ಸಹಸ್ರ ಮನೆಗಳಲ್ಲಿ ಜ್ಞಾನಜ್ಯೋತಿಯನ್ನು ಬೆಳಗಿಸಿದವರು ಪರಮಪೂಜ್ಯ ಶ್ರೀಗಳವರು. 'ಮಾತೃದೇವೋಭವ, ಪಿತೃದೇವೋಭವ,




ಶ್ರೀಮತಿ ಸೋನಿಯಾ ಗಾಂಧಿ ಅವರಿಂದ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಗೌರವ ಸಮರ್ಪಣೆ




ಶ್ರೀಮತಿ ಸೋನಿಯಾ ಗಾಂಧಿ ಅವರಿಂದ ಸುತ್ತೂರು ಶ್ರೀಗಳವರಿಗೆ ಗೌರವ ಸಮರ್ಪಣೆ

ಆಚಾರ್ಯದೇವೋಭವ, ಅತಿಥಿ ದೇವೋ ಭವ' ಎಂಬ ಉಪನಿಷತ್ ವಾಕ್ಯಕ್ಕೆ ನಮ್ಮ ಪೂಜ್ಯರು ಇನ್ನೊಂದು ಮಾತನ್ನು ಸೇರಿಸಿದ್ದಾರೆ. ಅದು 'ವಿದ್ಯಾರ್ಥಿ ದೇವೋಭವ'. ಗುರುವೇ ನಮಗೆ ಸರ್ವಸ್ವವಾಗಿದ್ದಾರೆ. ಪರಮಪೂಜ್ಯರ ಶ್ರೀರಕ್ಷೆ, ಮಾರ್ಗದರ್ಶನ ನಮ್ಮೆಲ್ಲರನ್ನು ಕೈಹಿಡಿದು ಬೆಳಕಿನಡೆಗೆ ನಡೆಸಲಿ ಎಂದು ಪ್ರಾರ್ಥಿಸಿದರು. ನಂತರ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರಿಗೆ ಗೌರವ ಸಮರ್ಪಣೆ ಮಾಡಲಾಯಿತು. (ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳ ಭಕ್ತಿ ಸಮರ್ಪಣೆ ಸಂಪೂರ್ಣ ಪಾಠವನ್ನು ಪ್ರತ್ಯೇಕವಾಗಿ ಕೊಡಲಾಗಿದೆ.)

ದಿವ್ಯಉಪಸ್ಥಿತಿಯನ್ನು ವಹಿಸಿದ್ದ ಪರಮಪೂಜ್ಯ ಡಾ॥ ಶ್ರೀ ಶ್ರೀ ಬಾಲಗಂಗಾಧರನಾಥಮಹಾಸ್ವಾಮಿಗಳು ತಮ್ಮ ನುಡಿನಮನದಲ್ಲಿ ಶ್ರೀಮತಿ ಸೋನಿಯಾ ಗಾಂಧಿಯವರ ವ್ಯಕ್ತಿತ್ವದ ಗುಣಗಾನ ಮಾಡಿದರು. ಅವರು ಶ್ರೀಮತಿ ಸೋನಿಯಾ ಗಾಂಧಿಯವರು ದಿಟ್ಟ ಮನಸ್ಸುಳ್ಳವರು. ಸಾವಿರಾರು ಮುಂದಾಳುಗಳನ್ನು ತಯಾರು ಮಾಡಿದರು. ದೇಶ ಅವರ ಕಡೆ ನೋಡುತ್ತಿದೆ ಎಂದರು.

ಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ದೇಹಕ್ಕೆ ೧೦೫ ವರ್ಷವಾಗಿರಬಹುದು. ಅವರು ಲಕ್ಷಾಂತರ ವಿದ್ಯಾರ್ಥಿಗಳ ಭವಿಷ್ಯವನ್ನು ರೂಪಿಸಿದ್ದಾರೆ. ಅವರ ತ್ಯಾಗವನ್ನು ಬಣ್ಣಿಸಲು ಮಾತುಗಳು ಸಾಕಾಗುವುದಿಲ್ಲ. ಅವರು ಸಮಾಜದ ಅಭಿವೃದ್ಧಿಗೆ ಸಲ್ಲಿಸುತ್ತಿರುವ ಸೇವೆ ಅನನ್ಯವಾದುದು. ನಮ್ಮ ಮಠವೂ ಸೇರಿದಂತೆ ಅನೇಕ ಮಠಗಳು ಪೂಜ್ಯಶ್ರೀಗಳವರ ಮಾರ್ಗದರ್ಶನದಿಂದ ಅಕ್ಷರ, ಅನ್ನ ನೀಡುತ್ತಿದ್ದೇವೆ. ಅವರ ಹುಟ್ಟುಹಬ್ಬವನ್ನು ಆಚರಿಸುತ್ತಿರುವುದು ನಮಗೆಲ್ಲ ಸಂತೋಷವನ್ನುಂಟುಮಾಡಿದೆ. ಶ್ರೀಮಠದಲ್ಲಿ ನಡೆಯುವ








ಪರಮಪೂಜ್ಯ ಶ್ರೀ ಶ್ರೀಗಳವರಿಂದ ಶಿವನುಡಿ

ದೊಡ್ಡ ಕಾರ್ಯಕ್ರಮಗಳಿಗೆ ನಮ್ಮನ್ನು ಕರೆಯುತ್ತಿರುವುದು ಶ್ರೀಗಳು ನಮ್ಮ ಮೇಲಿಟ್ಟಿರುವ ಪ್ರೀತಿಯ ದ್ಯೋತಕ. ಅವರಿನ್ನು ಹತ್ತಾರು ವರ್ಷಗಳ ಕಾಲವಿದ್ದು ಬಡಮಕ್ಕಳ ಭವಿಷ್ಯವನ್ನು ರೂಪಿಸಿಕೊಳ್ಳಲು ನೆರವಾಗಲಿ ಎಂದು ಹಾರೈಸಿದರು.

ಸಮಾರಂಭದ ದಿವ್ಯ ಅಧ್ಯಕ್ಷತೆ ವಹಿಸಿದ್ದ ಶ್ರೀ ಸುತ್ತೂರು ವೀರಸಿಂಹಾಸನ ಮಹಾಸಂಸ್ಥಾನ ಮಠದ ಪರಮಪೂಜ್ಯ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಮಾತನಾಡಿ ೧೦೫ ದೀಪಗಳು ತ್ಯಾಗದ, ಪ್ರೀತಿಯ ಸಂಕೇತ ಎಂದು ಹೇಳಿದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳವರ ಮಾತಿಗೆ ಧ್ವನಿಗೂಡಿಸಿದ ಸುತ್ತೂರು ಶ್ರೀಗಳು ಪೂಜ್ಯ ಶ್ರೀಗಳವರು ನೋವನ್ನು ನುಂಗಿ ಸಮಾಜಕ್ಕೆ ಒಳ್ಳೆಯ ಬೆಳಕ[illegible] ಬಂದಿದ್ದಾರೆ. ಈ ಮ[illegible]ಠ ಇಷ್ಟೊಂದು [illegible] ಬೇಕಾದರೆ ಶ್ರೀಮಠದ ಗುರು ಪರಂಪರೆಯ ಆಶೀರ್ವಾದವಿದೆ. ಅವರ ಆಶೀರ್ವಾದದಿಂದ ಪೂಜ್ಯ ಶ್ರೀಗಳವರು ಮಠವನ್ನು ಮುನ್ನಡೆಸಿಕೊಂಡು ಬರುತ್ತಿದ್ದಾರೆ ಎಂದರು.

ಆಧ್ಯಾತ್ಮಿಕ ಶಕ್ತಿಯಿಂದ ಸಮಾಜದಲ್ಲಿ ಶಾಂತಿ ನೆಲಸಲು ಸಾಧ್ಯವಾಗಿದೆ ಎಂದು ತಿಳಿಸಿದ ಸುತ್ತೂರು ಶ್ರೀಗಳು ಶ್ರೀ ಜೆ.ಹೆಚ್. ಪಟೇಲರು ಮುಖ್ಯಮಂತ್ರಿಯಾಗಿದ್ದಾಗ ಹೇಳಿದ ಘಟನೆಯನ್ನು ಪ್ರಸ್ತಾಪಿಸಿದರು. 'ಪೂಜ್ಯ ಶ್ರೀಗಳು ಇರುವುದರಿಂದ ನಮ್ಮ ಸಮಾಜ ಸುಭಿಕ್ಷವಾಗಿದೆ. ಬಹುಕಾಲ ನೀವಿದ್ದು ಸಮಾಜಕ್ಕೆ ಮಾರ್ಗದರ್ಶನ ನೀಡಬೇಕು' ಎಂಬ ಮಾತನ್ನು ಸ್ಮರಿಸಿದರು. ಇದೇ ಸಂದರ್ಭದಲ್ಲಿ ಶ್ರೀ ಎಸ್.ಎಂ. ಕೃಷ್ಣ ರವರು ಹೇಳಿದ ಮಾತನ್ನು ಪುನರುಚ್ಚರಿಸಿದ ಶ್ರೀಗಳು 'ನಮ್ಮೆಲ್ಲರ ವಯಸ್ಸಿನ ಒಂದೊಂದು ದಿನವನ್ನು ಸ್ವಾಮೀಜಿಯವರಿಗೆ ಧಾರೆ ಎರೆಯೋಣ' ಎಂಬ ಮಾತಿಗೆ ಧ್ವನಿಗೂಡಿಸಿದರು.




ಶ್ರೀಮತಿ ಸೋನಿಯಾ ಗಾಂಧಿ ಅವರಿಂದ ಆದಿ ಚುಂಚನಗಿರಿ ಶ್ರೀಗಳವರಿಗೆ ಗೌರವ ಸಮರ್ಪಣೆ




ಶ್ರೀಮತಿ ಸೋನಿಯಾ ಗಾಂಧಿ ಅವರಿಂದ ಉದ್ಘಾಟನಾ ಭಾಷಣ

ಈ ದಿನ ಹಚ್ಚಿದ ನೂರೈದು ದೀಪಗಳು ಕತ್ತಲೆ ಓಡಿಸುತ್ತಿದೆ. ದೀಪದೊಳಗಿನ ಬತ್ತಿ ಬೆಂಕಿಯ ಉರಿಯ ನೋವು ನುಂಗಿಕೊಂಡು ಜ್ಯೋತಿಯಾಗಿ ಬೆಳಗಿ ಸಮಾಜಕ್ಕೆ ಬೆಳಕನ್ನು ನೀಡುತ್ತಿದೆ. ಅದೇ ರೀತಿ ಎಲ್ಲ ನೋವುಗಳನ್ನು ಒಡಲಲ್ಲಿಟ್ಟುಕೊಂಡು ಪೂಜ್ಯ ಶ್ರೀಗಳು ಜಗತ್ತಿಗೆ ಬೆಳಗಾಗಿದ್ದಾರೆ. ಶ್ರೀಗಳು ಈಗಾಗಲೇ ಶತಕದ ಮೇಲೆ ಒಂದು ಬೌಂಡರಿ ಬಾರಿಸಿದ್ದಾರೆ. ಇನ್ನೊಂದು ಬೌಂಡರಿ ಸಿಕ್ಸರ್ ಬಾರಿಸಲಿ ಎಂಬುದು ನಮ್ಮೆಲ್ಲರ ಆಶಯ ಎಂದರು.

ಇದೇ ಸಂದರ್ಭದಲ್ಲಿ ಸುತ್ತೂರು ಜಗದ್ಗುರುಗಳು ಪೂಜ್ಯ ಶ್ರೀಗಳವರಿಗೆ ಭಕ್ತಿಸಮರ್ಪಿಸಿ ಶ್ರೀಮತಿ ಸೋನಿಯಾ ಗಾಂಧಿಯವರಿಗೆ ಪುಷ್ಪಗುಚ್ಛ ಅರ್ಪಣೆ ಮಾಡಿದರು.

ಶ್ರೀಮತಿ ಸೋನಿಯಾ ಗಾಂಧಿಯವರು ಕಾಂಗ್ರೆಸ್ ಮುಖಂಡ ಶ್ರೀ ಶ್ಯಾಮನೂರು ಶಿವಶಂಕರಪ್ಪನವರು ನೀಡಿದ ಪರಮಪೂಜ್ಯ ಶ್ರೀಗಳವರ ೧೦೫ನೇ ವರ್ಷಗಳ ಹುಟ್ಟುಹಬ್ಬಕ್ಕೆ ಸಾಂಕೇತಿಕವಾಗಿ ೧೦೫ ಲಕ್ಷ ರೂಗಳ ಚೆಕ್ಕನ್ನು ಪರಮಪೂಜ್ಯ ಶ್ರೀಗಳವರಿಗೆ ಅರ್ಪಿಸಿದರಲ್ಲದೆ; ಪೂಜ್ಯ ಶ್ರೀಗಳವರಿಗೆ ಶಾಲು ಹೊದಿಸಿ ಹಾರ ಹಾಕಿ ಭಕ್ತಿ ಸಮರ್ಪಣೆ ಮಾಡಿದರು.

ಪರಮಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ತಮ್ಮ ಆಶೀರ್ವಚನದಲ್ಲಿ ಭರತಖಂಡ ಜಗತ್ತಿನಲ್ಲಿ ತುಂಬಾ ಮಹತ್ವವಾದುದು. ಭಾರತ ಮಾತೆ ನಮ್ಮ ತಾಯಿ. ಮನುಕುಲಕ್ಕೆ ಭಾರತೀಯರ ಕೊಡುಗೆ ವಿಶಿಷ್ಟವಾದುದು.

ಭಾರತವನ್ನು ಅಭಿವೃದ್ಧಿ ಪಥದತ್ತ ಮುನ್ನಡೆಸಬಲ್ಲಂತ ಎಲ್ಲ ಪಕ್ಷಗಳಲ್ಲಿನ ಶ್ರೇಷ್ಠ ಮತ್ತು ಪ್ರಾಮಾಣಿಕತೆಯಿರುವ ನಾಯಕರನ್ನೊಳಗೊಂಡ ರಾಷ್ಟ್ರ ಸರ್ಕಾರವೊಂದು ಅಸ್ತಿತ್ವಕ್ಕೆ ಬರಬೇಕೆಂಬುದು ತಮ್ಮ ಕನಸು ಎಂದು ತಮ್ಮ ಮನದಾಳದ ಭಾವನೆಯನ್ನು ವ್ಯಕ್ತಪಡಿಸಿದರು.

ಈ ರಾಷ್ಟ್ರವನ್ನು ಪ್ರಗತಿ ಪಥದಲ್ಲಿ ಕೊಂಡೊಯ್ಯಲು ಎಲ್ಲ ಪಕ್ಷಗಳು ಕೈಗೂಡಿಸಬೇಕಿದೆ. ಇಂದು ವಿಜ್ಞಾನ ಮತ್ತು ತಂತ್ರಜ್ಞಾನ ಶರವೇಗದಲ್ಲಿ ಮುನ್ನಡೆಯುತ್ತಿದೆ. ಆದರೆ ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರದಲ್ಲಿ ಅಪಾರವಾದ ಸಾಧನೆ ಮಾಡಿದರೂ ಶಾಂತಿ ನೆಮ್ಮದಿ ಕಾಣೆಯಾಗಿದೆ. ಆಧ್ಯಾತ್ಮಿಕತೆ, ಧಾರ್ಮಿಕತೆಯ ಮೂಲಕ ಶಾಂತಿ ನೆಲಸುವಂತೆ ಮಾಡಲು ಭಾರತೀಯರು ಶಾಂತಿ ಮಂತ್ರವನ್ನು ಬೋಧಿಸಬೇಕಾದ ಅಗತ್ಯವಿದೆ ಎಂದು ಒತ್ತಿ ಹೇಳಿದರು.

ಮನುಷ್ಯನಿಗೆ ಮೂಲಭೂತ ಅವಶ್ಯಕತೆಗಳಾದ ಹೊಟ್ಟೆ ತುಂಬ ಅನ್ನ, ಬಟ್ಟೆ, ವಾಸ ಮಾಡಲು ಮನೆ ಪ್ರತಿಯೊಬ್ಬರಿಗೂ ಒದಗಿಸಬೇಕು. ಇವತ್ತು ಸಮಾಜದಲ್ಲಿ ಬೇರು ಬಿಟ್ಟಿರುವ ಸೋಮಾರಿತನ, ಪರಾವಲಂಬನೆ ಹೋಗಬೇಕಿದೆ. ಪ್ರತಿಯೊಬ್ಬರೂ ತಮ್ಮ ಕರ್ತವ್ಯ, ಸ್ಥಾನಮಾನಗಳನ್ನು ಅರಿತು ದುಡಿಯುವ ಮೂಲಕ








ಪರಮಪೂಜ್ಯ ಶ್ರೀಗಳವರಿಂದ ಶ್ರೀಮತಿ ಸೋನಿಯಾ ಗಾಂಧಿ ಅವರಿಗೆ ಗೌರವ ಸಮರ್ಪಣೆ

ಸಮಾಜದಲ್ಲಿ ಸಾಮರಸ್ಯ, ಸಮೃದ್ಧಿ ಸಾಧಿಸಲು ಶ್ರಮಿಸಬೇಕು ಎಂದು ನೆರೆದಿದ್ದ ಭಕ್ತಸಮೂಹಕ್ಕೆ ಕರೆ ನೀಡಿದರು.

ಜಗತ್ತಿನಲ್ಲಿಯೇ ಹಿಂಸೆ, ಬಡತನ, ಹಸಿವು, ಭಯೋತ್ಪಾದನೆ ತಾಂಡವವಾಡುತ್ತಿದೆ. ಇದನ್ನೆಲ್ಲಾ ಹತ್ತಿಕ್ಕಲು ಮನುಷ್ಯ ಆಧ್ಯಾತ್ಮಿಕತೆ ಮತ್ತು ಧರ್ಮದ ಹಾದಿಯಲ್ಲಿ ನಡೆಯಬೇಕಿದೆ. ಇದಕ್ಕೆಲ್ಲ ಪರಿಹಾರವೆಂದರೆ ಮನುಷ್ಯ ಆಧ್ಯಾತ್ಮಿಕತೆ ಮತ್ತು ಧರ್ಮದ




ಕಾಂಗ್ರೆಸ್ ಮುಖಂಡ ಶ್ರೀ ಶಾಮನೂರು ಶಿವಶಂಕರಪ್ಪನವರು ಶ್ರೀಮಠಕ್ಕೆ ನೀಡಿದ ಕಾಣಿಕೆಯನ್ನು ಚೆಕ್ ಮುಖಾಂತರ ಪೂಜ್ಯ ಶ್ರೀಗಳವರಿಗೆ ಸಮರ್ಪಿಸುತ್ತಿರುವುದು

ಹಾದಿಯಲ್ಲಿ ನಡೆಯಬೇಕಿದೆ. ಆಧ್ಯಾತ್ಮಿಕತೆಗೆ ವ್ಯಾಖ್ಯಾನ ನೀಡಿದ ಪರಮಪೂಜ್ಯರು ಆಧ್ಯಾತ್ಮಿಕತೆಯೆಂದರೆ ಜವಾಬ್ದಾರಿಯಿಂದ ನುಣುಚಿಕೊಳ್ಳುವುದಲ್ಲ, ಪ್ರಾಮಾಣಿಕತೆ, ವಿಶ್ವಭ್ರಾತೃತ್ವ, ಅಖಂಡತೆಯನ್ನೊಳಗೊಂಡ ಕ್ರಿಯಾಶೀಲ ಜೀವನವನ್ನು ಆಧ್ಯಾತ್ಮಿಕತೆ ಕಲಿಸಿಕೊಡುತ್ತದೆ ಎಂದರು.

ನಾವೆಲ್ಲರೂ ಭಾರತೀಯರೆಂಬ ಸಂಕಲ್ಪವನ್ನು ತೊಡಬೇಕಾದ ಕಾಲ ಸನ್ನಿಹಿತವಾಗಿದೆ. ಪರಸ್ಪರ ದ್ವೇಷ, ಅಸೂಯೆಗಳನ್ನು ಬಿಟ್ಟು ಹೊರಬರಬೇಕಿದೆ. ಪ್ರತಿಯೊಬ್ಬರು ಜೀವನದ ಆದರ್ಶ ಮೌಲ್ಯಗಳನ್ನು ಮೈಗೂಡಿಸಿಕೊಂಡು ದೇಶದ ಅಭಿವೃದ್ಧಿವಾಹಿನಿಯಲ್ಲಿ ಪ್ರತಿಯೊಬ್ಬರು ಕೈ ಜೋಡಿಸಬೇಕಾಗಿದೆ ಎಂದು ಹೇಳಿದರು.

ತಮ್ಮ ಆಶೀರ್ವಚನದ ಕೊನೆಯಲ್ಲಿ ತಾಯಿ ಸೋನಿಯಾ ರವರು ದೂರದಿಂದ ಶ್ರೀಮಠಕ್ಕೆ ಆಗಮಿಸಿದ್ದಾರೆ. ಅವರಿಗೆ ದೇವರು ಸಕಲ ಐಶ್ವರ್ಯ, ಉತ್ತಮ ಆರೋಗ್ಯ ಕೊಡಲಿ ಎಂದು ಆಶೀರ್ವದಿಸಿದರು.

ಉದ್ಘಾಟನಾ ಭಾಷಣ ಮಾಡಿದ ಶ್ರೀಮತಿ ಸೋನಿಯಾ ಗಾಂಧಿಯವರು ಪ್ರಾರಂಭದಲ್ಲಿ ಕನ್ನಡದಲ್ಲಿ **'ಎಲ್ಲರಿಗೂ ನಮಸ್ಕಾರ'** ಎಂದು ಹೇಳುವುದರ ಮೂಲಕ ಭಕ್ತರು, ಅಭಿಮಾನಿಗಳನ್ನು



ಶ್ರೀಮತಿ ಸೋನಿಯಾ ಗಾಂಧಿ ಅವರಿಂದ
ಪರಮಪೂಜ್ಯ ಶ್ರೀಗಳವರಿಗೆ ಭಕ್ತಿ ನಮನ




ಪರಮಪೂಜ್ಯ ಶ್ರೀ ಶ್ರೀಗಳವರೊಂದಿಗೆ ಶ್ರೀಮತಿ ಸೋನಿಯಾ ಗಾಂಧಿಯವರು ಆಪ್ತ ಸಮಾಲೋಚನೆಯಲ್ಲಿ. ಅವರೊಂದಿಗೆ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು



ಪೂಜ್ಯ ಶ್ರೀ ಶ್ರೀ ಜಪಾನಂದ ಮಹಾಸ್ವಾಮಿಗಳವರಿಂದ
ಪರಮಪೂಜ್ಯ ಶ್ರೀಗಳವರ ಭಾವಚಿತ್ರ ಅನಾವರಣ

ರೋಮಾಂಚನಗೊಳಿಸಿದರು. ಅವರ ಭಾಷಣದಲ್ಲಿ ಎಲ್ಲಿಯೂ ರಾಜಕೀಯ ವಿಚಾರವನ್ನು ಪ್ರಸ್ತಾಪಿಸದೆ ತಮ್ಮ ಒಂಭತ್ತು ನಿಮಿಷಗಳ ಭಾಷಣವನ್ನು ಪರಮಪೂಜ್ಯ ಶ್ರೀಗಳವರು ೮೦ ವರ್ಷಗಳಿಂದ ಸತತವಾಗಿ ಸಾಮಾಜಿಕವಾಗಿ, ಶೈಕ್ಷಣಿಕವಾಗಿ ಸಲ್ಲಿಸಿದ ಅನನ್ಯ ಸೇವೆಯನ್ನು ಶ್ಲಾಘಿಸುವುದಕ್ಕಷ್ಟೇ ಸೀಮಿತಗೊಳಿಸಿದರು.




ಸ್ವಧರ್ಮದಲ್ಲಿ ಶ್ರದ್ಧೆ-ಇತರ ಧರ್ಮಗಳ ಬಗ್ಗೆ ಗೌರವ ವಿಷಯವನ್ನು ಕುರಿತು ಬಸವ ಸಮಿತಿ ಅಧ್ಯಕ್ಷರಾದ ಶ್ರೀ ಅರವಿಂದ ಜತ್ತಿ ಅವರಿಂದ ಉಪನ್ಯಾಸ




ಸ್ವಧರ್ಮದಲ್ಲಿ ಶ್ರದ್ಧೆ-ಇತರ ಧರ್ಮಗಳ ಬಗ್ಗೆ ಗೌರವ ವಿಷಯವನ್ನು ಕುರಿತು ಅಲ್-ಅಮೀನ್ ಎಜುಕೇಷನಲ್ ಸೊಸೈಟಿಯ ಅಧ್ಯಕ್ಷರಾದ ಡಾ|| ಮಮ್ತಾಜ್ ಅಹಮದ್ ಖಾನ್ ಅವರಿಂದ ಉಪನ್ಯಾಸ

ಶ್ರೀಗಳವರು ಕಳೆದ ಎಂಭತ್ತು ವರ್ಷಗಳಿಂದ ಅಕ್ಷರ ದಾಸೋಹ ಮಾಡುತ್ತಿರುವ ಶ್ರೀ ಸಿದ್ಧಗಂಗಾ ಕ್ಷೇತ್ರ ನಮ್ಮ ಸರ್ಕಾರಕ್ಕೆ ಪ್ರೇರಣೆಯಾಗಿದೆ. ಈ ಕಾರಣಕ್ಕಾಗಿಯೇ ೬ರಿಂದ ೧೪ ವರ್ಷದ ಮಕ್ಕಳಿಗೆ ಸರ್ಕಾರ ಉಚಿತ ಶಿಕ್ಷಣ ನೀಡಬೇಕು ಎಂಬ ನೀತಿಯನ್ನು ನಾವು ಜಾರಿಗೆ ತಂದಿದ್ದೇವೆ ಎಂದು ತಿಳಿಸಿದರು.

ಅವರು ತಮ್ಮ ಭಾಷಣದ ಆರಂಭದಲ್ಲಿ "ಮೊದಲಿಗೆ ಸ್ವಾಮೀಜಿಯವರು ಸಮಾಜಕ್ಕೆ ನೀಡುತ್ತಿರುವ ಸೇವೆಯನ್ನು








ರಾಷ್ಟ್ರಕವಿ ಡಾ|| ಜಿ.ಎಸ್. ಶಿವರುದ್ರಪ್ಪನವರ ಅಧ್ಯಕ್ಷತೆಯಲ್ಲಿ ಹೊರತಂದ 'ಅನುಭಾವಪಥ' ಗ್ರಂಥವನ್ನು ಪೂಜ್ಯ ಶ್ರೀ ಶ್ರೀ ಪಂಚಮ ಶಿವಲಿಂಗೇಶ್ವರ ಮಹಾಸ್ವಾಮಿಗಳು ಲೋಕಾರ್ಪಣೆ ಮಾಡುತ್ತಿರುವುದು.

ಅಭಿನಂದಿಸುತ್ತೇನೆ. ಶ್ರೀ ಶ್ರೀ ಶಿವಕುಮಾರಸ್ವಾಮೀಜಿಯವರ ಲಕ್ಷಾಂತರ ಜನರಿಗೆ ಪ್ರೇರಕ ಶಕ್ತಿಯಾಗಿದ್ದಾರೆ. ರಾಷ್ಟ್ರ, ಜಗತ್ತಿಗೆ ಮಾದರಿಯಾಗಿ ಬೆಳಗುತ್ತಿದ್ದಾರೆ. ಶಿಕ್ಷಣ ಕ್ಷೇತ್ರದಲ್ಲಿ ಯಾರೂ ಮಾಡಲಾಗದ ಸಾಧನೆಯನ್ನು ಮಾಡಿ ತೋರಿಸಿದ್ದಾರೆ' ಎಂದರು.

ಮಠಮಾನ್ಯಗಳು ಎಲ್ಲ ಸಮುದಾಯದ ಜನರಿಗೆ ಶಿಕ್ಷಣ ನೀಡುವುದರ ಮೂಲಕ ಅಕ್ಷರ ಜ್ಯೋತಿಯನ್ನು ಬೆಳಗುತ್ತಿವೆ. ಇವು




'ಯುಗಗಂಗಾ' ಗ್ರಂಥವನ್ನು ಪೂಜ್ಯ ಶ್ರೀ ಶ್ರೀ ಶಿವಾನುಭವ ಚರಮೂರ್ತಿ ಶಿವರುದ್ರ ಮಹಾಸ್ವಾಮಿಗಳವರು ಲೋಕಾರ್ಪಣೆ ಮಾಡುತ್ತಿರುವುದು

ಗುಣಮಟ್ಟದ ಶಿಕ್ಷಣವನ್ನು ನೀಡುವುದರ ಮೂಲಕ ಸಮಾಜಕ್ಕೆ ಸನ್ಮಾರ್ಗವನ್ನು ತೋರುತ್ತವೆ. ಸಮಾಜದಲ್ಲಿ ನೈತಿಕ ಮೌಲ್ಯವನ್ನು ಬಿತ್ತಿ ಬೆಳೆಸಿರುವ ಪೂಜ್ಯ ಸ್ವಾಮೀಜಿಯವರು ವರ್ಗವರ್ಗಗಳ ನಡುವೆ ತಾರತಮ್ಯ ಮಾಡದೆ ಶೈಕ್ಷಣಿಕ ಕ್ರಾಂತಿಯನ್ನೇ ಉಂಟುಮಾಡಿದ್ದಾರೆ. ಸ್ವಾಮೀಜಿಯವರು ನಮಗೆ ಸದಾ ಪ್ರೇರಕರು, ಮಾರ್ಗದರ್ಶಕರಾಗಿದ್ದಾರೆ ಎಂದು ತಿಳಿಸಿದರು.

ಕರ್ನಾಟಕದಲ್ಲಿ ಉತ್ತಮ ಶೈಕ್ಷಣಿಕ ವಾತಾವರಣವಿದೆ. ಶ್ರೀಮಂತ ಸಂಸ್ಕೃತಿ, ಪರಂಪರೆಯನ್ನು ಹೊಂದಿದೆ. ದೇಶದ ಬೇರೆ ಭಾಗಗಳಿಗಿಂತ ಕರ್ನಾಟಕದಲ್ಲಿ ಉತ್ತಮ ಶಿಕ್ಷಣ, ಸೌಲಭ್ಯಗಳು ದೊರೆಯುತ್ತಿವೆ ಎಂದರು.

ಶ್ರೀ ಸಿದ್ಧಗಂಗಾ ಕ್ಷೇತ್ರ ಉತ್ತಮ ವಿದ್ಯಾರ್ಥಿಗಳನ್ನು ಸೃಷ್ಟಿಸುತ್ತಿದೆ. ರಾಷ್ಟ್ರನಿರ್ಮಾಣಕ್ಕೆ ಇವರ ಕೊಡುಗೆ ಅಪಾರ. ಇಲ್ಲಿ ವಿದ್ಯಾಭ್ಯಾಸ ಮಾಡಿದ ವಿದ್ಯಾರ್ಥಿಗಳು ದೇಶದ ಅನೇಕ ಉನ್ನತ ಹುದ್ದೆಗಳಲ್ಲಿ ಇದ್ದಾರೆ. ಸ್ತ್ರೀ-ಪುರುಷರ ನಡುವಿನ ಅಸಮಾನತೆ ಹೋಗಲಾಡಿಸಲು ಶಿಕ್ಷಣ ತೀರ ಅಗತ್ಯವಾದುದು ಎಂದು ತಿಳಿಸಿದರು. **'ಎಲ್ಲರಿಗೂ ಶರಣು ಶರಣಾರ್ಥಿ'** ಎಂದು ಹೇಳುವುದರ ಮೂಲಕ ತಮ್ಮ ಭಾಷಣವನ್ನು ಮುಗಿಸಿದರು.

ಶ್ರೀಮತಿ ಸೋನಿಯಾ ಗಾಂಧಿಯವರ ಸಂಗೀತ ಪ್ರೇಮದ ಬಗ್ಗೆ ಒಂದು ವಿಚಾರವನ್ನು ಪ್ರಸ್ತಾಪಿಸುವುದು ಸೂಕ್ತವೆನಿಸುತ್ತದೆ.


ಸ್ವಧರ್ಮದಲ್ಲಿ ಶ್ರದ್ಧೆ–ಇತರ ಧರ್ಮಗಳ ಬಗ್ಗೆ ಗೌರವ ವಿಷಯವನ್ನು ಕುರಿತು ಬೆಂಗಳೂರಿನ ಪ್ರೆಸ್‌ಬೈಟರ್, ಸಿ.ಎಸ್.ಐ.ನ ರೆವೆರೆಂಡ್ ಡಾ|| ಮನೋಹರ್ ಚಂದ್ರಪ್ರಸಾದ್ ಅವರಿಂದ ಉಪನ್ಯಾಸ


ಸ್ವಧರ್ಮದಲ್ಲಿ ಶ್ರದ್ಧೆ–ಇತರ ಧರ್ಮಗಳ ಬಗ್ಗೆ ಗೌರವ ವಿಷಯವನ್ನು ಕುರಿತು ನಿವೃತ್ತ ಪ್ರಿನ್ಸಿಪಾಲರಾದ ಡಾ|| ಬಸವರಾಜ ಜಗಜಂಪಿ ಅವರಿಂದ ಉಪನ್ಯಾಸ


ಧಾರ್ಮಿಕ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದ ಪೂಜ್ಯ ಶ್ರೀ ಶ್ರೀ ಜಪಾನಂದ ಮಹಾಸ್ವಾಮಿಗಳವರಿಂದ ನುಡಿನಮನ

ಕಾರ್ಯಕ್ರಮದ ಆರಂಭದಲ್ಲಿ ಶ್ರೀಮಠದ ವಿದ್ಯಾರ್ಥಿಗಳು ನಡೆಸಿಕೊಟ್ಟ **'ನುಡಿದರೆ ಮುತ್ತಿನ ಹಾರದಂತಿರಬೇಕು'** ಹಾಗೂ ಸ್ನೇಹ ಬಳಗದವರು ನಡೆಸಿ ಕೊಟ್ಟ **'ವಚನದಲ್ಲಿ ನಾಮಾಮೃತತುಂಬಿ ಬಸವ ಬೆಳಕು ಬೆಳಗಲಿ'** ಎಂಬ ಹಾಡಿನ ಮಾಧುರ್ಯಕ್ಕೆ ಮನಸೋತ ಶ್ರೀಮತಿ ಸೋನಿಯಾ ಗಾಂಧಿಯವರು ಗಾಯನದ ತಾಳ, ಲಯ, ಮಾಧುರ್ಯಕ್ಕೆ ತಲೆದೂಗಿ ತಾಳ ಹಾಕುತ್ತಿದ್ದರು. ಇಷ್ಟಕ್ಕೂ ತೃಪ್ತರಾಗದೆ ಪಕ್ಕದಲ್ಲಿ ಕುಳಿತಿದ್ದ ಸುತ್ತೂರು ಶ್ರೀಗಳವರಿಂದ ಆ ವಚನದ


ಅನುಭಾವಪಥ ಗ್ರಂಥ ಬಿಡುಗಡೆ ಮಾಡಿ ಆಶೀರ್ವಚನ ನೀಡುತ್ತಿರುವ ಪೂಜ್ಯ ಶ್ರೀ ಜಗದ್ಗುರು ಶ್ರೀ ಶ್ರೀ ಪಂಚಮಶಿವಲಿಂಗೇಶ್ವರ ಮಹಾಸ್ವಾಮಿಗಳವರು


ಯುಗಗಂಗಾ ಗ್ರಂಥ ಬಿಡುಗಡೆ ಮಾಡಿ ಆಶೀರ್ವಚನ ನೀಡುತ್ತಿರುವ ಪೂಜ್ಯ ಶ್ರೀ ಶ್ರೀ ಶಿವಾನುಭವ ಚರಮೂರ್ತಿ ಶಿವರುದ್ರ ಮಹಾಸ್ವಾಮಿಗಳು

ಅರ್ಥವನ್ನು ಕೇಳಿ ತಮ್ಮ ಸಹಾಯಕದಿಂದ ಪೆನ್ನು ಹಾಗೂ ಕಾಗದವನ್ನು ತರಿಸಿಕೊಂಡು ಗುರುತು ಹಾಕಿಕೊಂಡರು. ಇದರಿಂದ ಭಾಷೆ ಅರ್ಥವಾಗದಿದ್ದರೂ ಭಾವನೆಯನ್ನು ಅರ್ಥಮಾಡಿಕೊಳ್ಳಬಹುದು ಎಂಬ ಮಾತು ಶ್ರೀಮತಿ ಸೋನಿಯಾ ಗಾಂಧಿಯವರ ವಿಚಾರದಲ್ಲೂ ನಿಜವಾಯಿತು. ಕಾರ್ಯಕ್ರಮವನ್ನು ಪ್ರೊ. ಕೆ.ಆರ್. ರಾಧಾಕೃಷ್ಣ ಅವರು ಸೊಗಸಾಗಿ ನಿರೂಪಿಸಿದರು.






ಶ್ರೀಮಠದ ಹಳೆಯ ವಿದ್ಯಾರ್ಥಿಗಳ ಮತ್ತು ಹಿತೈಷಿಗಳ ಸಂಘದ ವತಿಯಿಂದ ಕೊಡಮಾಡುವ 'ಸಿದ್ಧಗಂಗಾಶ್ರೀ' ಪ್ರಶಸ್ತಿಯನ್ನು ಕರ್ನಾಟಕ ರತ್ನ, ನಾಡೋಜ ಡಾ|| ದೇ. ಜವರೇಗೌಡರಿಗೆ ಪರಮಪೂಜ್ಯ ಶ್ರೀ ಶ್ರೀಗಳವರು ಪ್ರದಾನ ಮಾಡಿ ಆಶೀರ್ವದಿಸಿದರು. ಈ ಸಂದರ್ಭದಲ್ಲಿ ಪೂಜ್ಯ ಶ್ರೀ ಶ್ರೀ ಜಪಾನಂದ ಮಹಾಸ್ವಾಮಿಗಳು, ಪೂಜ್ಯ ಶ್ರೀ ಜಗದ್ಗುರು ಶ್ರೀ ಶ್ರೀ ಪಂಚಮಶಿವಲಿಂಗೇಶ್ವರ ಮಹಾಸ್ವಾಮಿಗಳು ಹಾಗೂ ಹಳೆಯ ವಿದ್ಯಾರ್ಥಿಗಳ ಮತ್ತು ಹಿತೈಷಿಗಳ ಸಂಘದ ಕಾರ್ಯದರ್ಶಿ ಶ್ರೀ ಕೆ.ಹೆಚ್. ಶಿವರುದ್ರಯ್ಯ ಅವರು ಉಪಸ್ಥಿತರಿದ್ದರು.

### *ಧಾರ್ಮಿಕ ಸಮ್ಮೇಳನ*

ಮಧ್ಯಾಹ್ನ ಧಾರ್ಮಿಕ ಸಮ್ಮೇಳನವನ್ನು ಏರ್ಪಡಿಸಲಾಗಿತ್ತು. **"ಸ್ವಧರ್ಮದಲ್ಲಿ ಶ್ರದ್ಧೆ, ಇತರ ಧರ್ಮಗಳ ಬಗ್ಗೆ ಗೌರವ"**, ಸಮ್ಮೇಳನದ ವಿಷಯವಾಗಿತ್ತು. ಕಾರ್ಯಕ್ರಮ ನಿಗದಿತ ಅವಧಿಗಿಂತ ೪೫ ನಿಮಿಷ ತಡವಾಗಿ ಆರಂಭವಾಯಿತು. ಸಮಾರಂಭದ ದಿವ್ಯಅಧ್ಯಕ್ಷತೆ ವಹಿಸಿದ್ದ ಪಾವಗಡ ರಾಮಕೃಷ್ಣಾಶ್ರಮದ ಪೂಜ್ಯ ಶ್ರೀ ಶ್ರೀ ಜಪಾನಂದಮಹಾ


'ಸಿದ್ಧಗಂಗಾಶ್ರೀ' ಪ್ರಶಸ್ತಿಯನ್ನು ಸ್ವೀಕಾರ ಮಾಡಿದ ಡಾ|| ದೇ. ಜವರೇಗೌಡ ಅವರಿಂದ ಕೃತಜ್ಞತಾ ನುಡಿ

ಸ್ವಾಮಿಗಳು ಕಲಾವಿದ ಶ್ರೀ ಎಂ.ಎಸ್. ಶಶಿಧರ್‌ರವರು ರಚಿಸಿದ ಪೂಜ್ಯ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರ ಭಾವಚಿತ್ರವನ್ನು ಲೋಕಾರ್ಪಣೆ ಮಾಡಿದರು.

ಉಪನ್ಯಾಸ ನೀಡಿದ ಬಸವ ಸಮಿತಿ ಅಧ್ಯಕ್ಷರಾದ ಶ್ರೀ ಅರವಿಂದ ಜತ್ತಿಯವರು 'ಅಂತರಂಗದ ಧ್ವನಿ ಧರ್ಮ, ಅನುಭಾವ ಅಂತರಂಗದ ಧ್ವನಿ ಬಸವಾದಿ ಶರಣರ ಅನುಭಾವವನ್ನು ಅಂತರಂಗದ ಧ್ವನಿಯಾಗಿಸಿಕೊಂಡಿದ್ದರು.

ಭಾರತದ ಆರ್ಥಿಕ ಪರಿಸ್ಥಿತಿ ಏರುತ್ತಾ ಹೋದ ಹಾಗೆ ಆಧ್ಯಾತ್ಮಿಕ ಸ್ಥಿತಿಯೂ ಕಡಿಮೆಯಾಗುತ್ತಿದೆ. ನಾವು ಸ್ವಧರ್ಮವನ್ನು ಪ್ರೀತಿಸಿದಂತೆ ಅನ್ಯಧರ್ಮವನ್ನು ಪ್ರೀತಿಸಿದಾಗ ಸಮಾಜದಲ್ಲಿ ಶಾಂತಿ, ನೆಮ್ಮದಿ ಸಾಮರಸ್ಯ ನೆಲಸುತ್ತದೆ' ಎಂದು ಹೇಳಿದರು.

### *ಅನುಭಾವಪಥ*

ರಾಷ್ಟ್ರಕವಿ ಡಾ|| ಜಿ.ಎಸ್. ಶಿವರುದ್ರಪ್ಪನವರ ಅಧ್ಯಕ್ಷತೆಯಲ್ಲಿ ಡಾ|| ಚೆನ್ನವೀರಕಣವಿ, ಪ್ರೊ.ಜಿ.ಎಸ್. ಸಿದ್ಧಲಿಂಗಯ್ಯ, ಶ್ರೀ ಗೊ.ರು. ಚನ್ನಬಸಪ್ಪ, ಡಾ|| ಎಂ.ಜಿ. ನಾಗರಾಜ್, ಶ್ರೀ ಎಚ್.ಎಸ್. ಸಿದ್ಧಗಂಗಪ್ಪ, ಪ್ರೊ. ಟಿ.ಆರ್. ಮಹಾದೇವಯ್ಯ, ಪ್ರೊ. ಓ.ಎಲ್. ನಾಗಭೂಷಣಸ್ವಾಮಿರವರ ಸಂಪಾದಕತ್ವದಲ್ಲಿ ಹೊರತಂದ ವಿಶ್ವದ

**ವಿವಿಧ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸಿದ ಸಾಧಕರಿಗೆ ಪರಮಪೂಜ್ಯ ಶ್ರೀ ಶ್ರೀಗಳವರಿಂದ ಸನ್ಮಾನ**

ಬೆಂಗಳೂರು ದೂರದರ್ಶನ ಕೇಂದ್ರದ ಉಪ ಮಹಾನಿರ್ದೇಶಕರಾದ ಡಾ|| ಮಹೇಶ್ ಜೋಷಿ ಅವರು

ಎಂ.ಎಸ್.ಐ.ಎಲ್. ಅಧ್ಯಕ್ಷರಾದ ಶ್ರೀ ವಿಕ್ರಂ ವಿ. ಪಾಟೀಲ್ ಅವರು

ಕರ್ನಾಟಕ ಜಾನಪದ ಅಕಾಡೆಮಿಯ ಅಧ್ಯಕ್ಷರೂ, ಖ್ಯಾತ ಜನಪದ ಗಾಯಕರು ಆದ ಡಾ|| ಬಾಸಂಡೂರು ಕೆಂಪಯ್ಯ ಅವರು

ಪರಮಪೂಜ್ಯ ಶ್ರೀ ಶ್ರೀಗಳವರ ಜೀವನ ಚರಿತ್ರೆಯನ್ನು ಉರ್ದುವಿನಲ್ಲಿ ಬರೆದ ಕೃತಿಯನ್ನು ಲೋಕಾರ್ಪಣೆ ಮಾಡುತ್ತಿರುವುದು

೮೧ ಸಂತರ ಬಗ್ಗೆ ಲೇಖನಗಳನ್ನೊಳಗೊಂಡ ಸುಮಾರು ಒಂದು ಸಾವಿರ ಪುಟದ ಬೃಹತ್ ಗ್ರಂಥ **'ಅನುಭಾವಪಥ'**ವನ್ನು ನಿಡಸೋಸಿ ಶ್ರೀ ಜಗದ್ಗುರು ದುರದುಂಡೀಶ್ವರ ಸಂಸ್ಥಾನ ಮಠದ ಪೂಜ್ಯ ಶ್ರೀ ಜಗದ್ಗುರು ಶ್ರೀ ಶ್ರೀ ಪಂಚಮ ಶಿವಲಿಂಗೇಶ್ವರಮಹಾಸ್ವಾಮಿಗಳು ಲೋಕಾರ್ಪಣೆ ಮಾಡಿ 'ನಮಗೆ ಅನುಭಾವ ಪಥದ ಒಳಗೆ ಏನಿದೆ ಎಂಬುದು ಗೊತ್ತಿಲ್ಲ. ಇದೀಗ ತಾನೆ ಗ್ರಂಥವನ್ನು ನೋಡುತ್ತಿರುವುದು' ಎಂದು ಹೇಳಿ ಒಂದು ಉತ್ತಮ ಗ್ರಂಥ ಮನುಷ್ಯನನ್ನು ಬದಲಾವಣೆ ಮಾಡುವ ಶಕ್ತಿಯನ್ನು ಹೊಂದಿದೆ. ನಮ್ಮ ಅರಿವಿನದಿಗಂತವನ್ನು ವಿಸ್ತರಿಸಿಕೊಳಲು ಪ್ರತಿಯೊಬ್ಬರೂ ಮನೆಯಲ್ಲಿ ಒಂದು ಪುಟ್ಟ ಗ್ರಂಥಾಲಯವನ್ನು ಹೊಂದಿರ ಬೇಕೆಂದರು. ಸ್ವಾಮೀಜಿಯವರು ಸಮಾಜಕ್ಕೆ ಸಲ್ಲಿಸುತ್ತಿರುವ ಅನನ್ಯ ಸೇವೆಯನ್ನು ಮುಕ್ತಕಂಠದಿಂದ ಶ್ಲಾಘಿಸಿದರು.

ಸಮಾರಂಭ ಮುಗಿದ ವಾರದ ನಂತರ ಅನುಭಾವ ಪಥ ಗ್ರಂಥ ಸಮಿತಿಯ ಅಧ್ಯಕ್ಷರಾದ ಡಾ|| ಜಿ.ಎಸ್. ಶಿವರುದ್ರಪ್ಪನವರ ಬೆಂಗಳೂರಿನ ನಿವಾಸಕ್ಕೆ ಸಮಿತಿಯ ಸಂಚಾಲಕರಾದ ಪ್ರೊ. ಹೆಚ್.ವಿ. ವೀರಭದ್ರಯ್ಯ, ಶ್ರೀ ಎಂ. ರೇಣುಕಾರಾಧ್ಯ, ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ಹಾಗೂ ಶ್ರೀ ವೀರಪ್ಪದೇವರು ಮತ್ತು ಶ್ರೀ ಡಿ.ಆರ್. ಉಮೇಶ್‌ರವರು ತೆರಳಿ ಶಾಲು ಹೊದಿಸಿ ಫಲ ತಾಂಬೂಲ, ಸ್ಮರಣಿಕೆಯನ್ನು ನೀಡಿ ಸನ್ಮಾನಿಸಿರುವುದನ್ನು ಈ ಸಂದರ್ಭದಲ್ಲಿ ಸ್ಮರಿಸಬಯಸುತ್ತೇನೆ.

### *ಯುಗಗಂಗಾ*

ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರು ನೂರು ವಸಂತಗಳನ್ನು ಪೂರೈಸಿದ ಶುಭ ಸಂದರ್ಭದಲ್ಲಿ ನಡೆದ ಶತಮಾನೋತ್ಸವ ಸಮಾರಂಭದ ಸಂಪೂರ್ಣ ವರದಿ ಹಾಗೂ ಸಂಬಂಧಿಸಿದ ಚಿತ್ರಗಳನ್ನೊಳಗೊಂಡ





ಸನ್ಮಾನಿತರ ಪರವಾಗಿ ಡಾ. ಬಾನಂದೂರು ಕೆಂಪಯ್ಯ ಅವರಿಂದ ಕೃತಜ್ಞತಾ ನುಡಿ

ಸಮಾರಂಭದಲ್ಲಿ ಮಠದ ವಿದ್ಯಾರ್ಥಿಗಳಿಂದ ಸಾಮೂಹಿಕ ಪ್ರಾರ್ಥನೆ

ಸಭಾಂಗಣದಲ್ಲಿ ಕಿಕ್ಕಿರಿದ ಭಕ್ತರು ಮತ್ತು ಅಭಿಮಾನಿಗಳು

ಪ್ರೊ. ಹೆಚ್.ವಿ. ವೀರಭದ್ರಯ್ಯ, ಶ್ರೀ ಎಚ್.ಎಸ್. ಸಿದ್ಧಗಂಗಪ್ಪ, ಶ್ರೀ ಎಂ. ರೇಣುಕಾರಾಧ್ಯ ಮತ್ತು ಶ್ರೀ ಕೆ.ಹೆಚ್. ಶಿವರುದ್ರಯ್ಯನವರ ಸಂಪಾದಕತ್ವದಲ್ಲಿ ಹೊರತಂದ **'ಯುಗಗಂಗಾ'** ಗ್ರಂಥವನ್ನು ಬೆಲಿಮಠದ ಪೂಜ್ಯ ಶ್ರೀ ಶ್ರೀ ಶಿವಾನುಭವ ಚರಮೂರ್ತಿ ಶಿವರುದ್ರ ಮಹಾಸ್ವಾಮಿಗಳು ಬಿಡುಗಡೆ ಮಾಡಿದರು. ಅವರು ಈ ಶುಭ ಸಂದರ್ಭದಲ್ಲಿ ಮಾತನಾಡಿ ಪೂಜ್ಯ ಶ್ರೀ ಶ್ರೀಗಳವರು ಈ ಯುಗದ ಆಧ್ಯಾತ್ಮಿಕತೆಯ ಅನನ್ಯ ಚೇತನ. ಕಾಯಕ-ದಾಸೋಹಗಳ ಅದ್ಭುತ. ಅವರು ಈ ಶತಮಾನ ಕಂಡ ಶ್ರೇಷ್ಠ ಅನುಭಾವಿಗಳು ಎಂದು ಹೇಳಿದರು.

### *ಉಪನ್ಯಾಸ*

ಬೆಂಗಳೂರಿನ ಅಲ್-ಅಮೀನ್ ಎಜುಕೇಷನಲ್ ಸೊಸೈಟಿಯ ಸಂಸ್ಥಾಪಕರು ಮತ್ತು ಅಧ್ಯಕ್ಷರೂ ಆದ ಡಾ|| ಮುಮ್ತಾಜ್ ಅಹಮದ್ ಖಾನ್, ಸಿ.ಎಸ್.ಐ. ಪ್ರೆಸ್‌ಬೈಟರ್ ರೆವರೆಂಡ್ ಡಾ|| ಮನೋಹರ್ ಚಂದ್ರಪ್ರಸಾದ್ ಹಾಗೂ ಬೆಳಗಾವಿ ಲಿಂಗರಾಜು ಕಾಲೇಜಿನ ನಿವೃತ್ತ ಪ್ರಿನ್ಸಿಪಾಲ್‌ರಾದ ಡಾ|| ಬಸವರಾಜ ಜಗಜಂಪಿಯವರು 'ಸ್ವಧರ್ಮದಲ್ಲಿ ಶ್ರದ್ಧೆ- ಇತರ ಧರ್ಮಗಳ ಬಗ್ಗೆ ಗೌರವ ವಿಷಯವನ್ನು ಕುರಿತು ಸೋದಾಹರಣವಾಗಿ ಉಪನ್ಯಾಸ ನೀಡಿದರು.

(ಇವರುಗಳು ಮಾಡಿದ ಉಪನ್ಯಾಸದ ಪೂರ್ಣಪಾಠವನ್ನು ಪ್ರತ್ಯೇಕವಾಗಿ ಕೊಡಲಾಗಿದೆ.)

### *'ಸಿದ್ಧಗಂಗಾಶ್ರೀ' ಪ್ರಶಸ್ತಿ ಪ್ರಧಾನ*

ಇದೇ ಸಂದರ್ಭದಲ್ಲಿ ಶ್ರೀಮಠದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ವತಿಯಿಂದ ಕಳೆದ ಮೂರು ವರ್ಷಗಳಿಂದ ನೀಡುತ್ತ ಬಂದಿರುವ 'ಸಿದ್ಧಗಂಗಾಶ್ರೀ' ಪ್ರಶಸ್ತಿಯನ್ನು ಈ ಸಲ ಮೈಸೂರು ವಿಶ್ವವಿದ್ಯಾನಿಲಯದ ವಿಶ್ರಾಂತ ಕುಲಪತಿಗಳಾದ ಕರ್ನಾಟಕರತ್ನ ಡಾ|| ದೇ. ಜವರೇಗೌಡರಿಗೆ ಪರಮಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳು ಪ್ರದಾನ ಮಾಡಿ ಆಶೀರ್ವದಿಸಿದರು. ಸನ್ಮಾನ ಪತ್ರವನ್ನು ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿ ಸಂಘ ಕಾರ್ಯದರ್ಶಿ ಶ್ರೀ ಕೆ.ಹೆಚ್. ಶಿವರುದ್ರಯ್ಯನವರು ವಾಚನ ಮಾಡಿದರು. ಪ್ರಶಸ್ತಿ ಒಂದು ಲಕ್ಷ ರೂ, ಸ್ಮರಣಿಕೆ, ತಾಮ್ರ ಪತ್ರವನ್ನು ನೀಡಿ ಶಾಲು ಹೊದಿಸಿ ಫಲ ತಾಂಬೂಲ ನೀಡಿ ಗೌರವಿಸಲಾಯಿತು. ಈಗಾಗಲೇ 'ಸಿದ್ಧಗಂಗಾಶ್ರೀ' ಪ್ರಶಸ್ತಿಗೆ ರಾಷ್ಟ್ರಕವಿ ಡಾ|| ಜಿ.ಎಸ್. ಶಿವರುದ್ರಪ್ಪ, ಪಂಡಿತ ಚನ್ನಪ್ಪ ಎರೇಸೀಮೆ (ಮರಣೋತ್ತರ) ಹಾಗೂ ಖ್ಯಾತ ಸಂಶೋಧಕ ಡಾ|| ಎಂ. ಚಿದಾನಂದಮೂರ್ತಿಯವರು ಭಾಜನರಾಗಿದ್ದಾರೆ.

ಪ್ರಶಸ್ತಿ ಸ್ವೀಕರಿಸಿ ಮಾತನಾಡಿದ ಡಾ|| ದೇ. ಜವರೇ ಗೌಡರು ಪರಮಪೂಜ್ಯ ಶ್ರೀಗಳವರು ಕಳೆದ ಎಂಬತ್ತೆರಡು ವರ್ಷಗಳಿಂದ ನಾಡಿನ ಶೈಕ್ಷಣಿಕ, ಸಾಮಾಜಿಕ ಹಾಗೂ ಧಾರ್ಮಿಕ ಕ್ಷೇತ್ರಗಳಿಗೆ

ನೀಡಿದ ಕೊಡುಗೆ ಅಪಾರ ಎಂದು ಮುಕ್ತಕಂಠದಿಂದ ಶ್ಲಾಘಿಸಿದರಲ್ಲದೆ ನಾಡಿನ ಸಾಂಸ್ಕೃತಿಕ ವೈಭವ ಹಾಗೂ ಪ್ರತಿಭಾ ವೈವಿಧ್ಯ ಸಂಪತ್ತಿನ ದೃಷ್ಟಿಯಿಂದ ೧೨ನೇ ಶತಮಾನದ ಕರ್ನಾಟಕಕ್ಕೆ ಸಾಟಿಯಾದ ರಾಷ್ಟ್ರ ಜಗತ್ತಿನಲ್ಲಿ ಮತ್ತೊಂದಿಲ್ಲ ಎಂದು ನುಡಿದರು.

ಇಂದು ದೇಶ ಎದುರಿಸುತ್ತಿರುವ ಜ್ವಲಂತ ಸಮಸ್ಯೆಗಳನ್ನು ಪ್ರಸ್ತಾಪಿಸಿ ಈ ದೇಶದ ಮರುಭೂಮಿಯಲ್ಲಿ ಸಿದ್ಧಗಂಗೆಯಂಥ ಓಯಸಿಸ್‌ಗಳಿರುವುದು ಸಮಾಧಾನದ ಸಂಗತಿ ಎಂದರು.

### *ಸಾಧಕರಿಗೆ ಸನ್ಮಾನ*

ನಾಡಿನ ಪ್ರತಿವರ್ಷ ಗುರುವಂದನಾ ಸಮಾರಂಭದಲ್ಲಿ ನಾಡಿನ ವಿವಿಧ ಕ್ಷೇತ್ರಗಳಲ್ಲಿ ಸಲ್ಲಿಸಿದ ಗಣನೀಯ ಸೇವೆಯನ್ನು ಗುರುತಿಸಿ ಸನ್ಮಾನಿಸುವಂತೆ ಈ ವರ್ಷವೂ ಕೂಡ ಬೆಂಗಳೂರು ದೂರದರ್ಶನ ಕೇಂದ್ರ ಉಪಮಹಾನಿರ್ದೇಶಕರಾದ ಡಾ|| ಮಹೇಶ್ ಜೋಷಿ, ಎಂ.ಎಸ್.ಐ.ಎಲ್. ಅಧ್ಯಕ್ಷರಾದ ಡಾ|| ವಿಕ್ರಂ ವಿ ಪಾಟೀಲ್, ಜನಪದ ಗಾಯಕರಾದ ಡಾ|| ಬಾನಂದೂರು ಕೆಂಪಯ್ಯನವರನ್ನು ಸನ್ಮಾನಿಸಲಾಯಿತು.

ಸನ್ಮಾನಿತರ ಪರವಾಗಿ ಪ್ರಸಿದ್ಧ ಜನಪದ ಗಾಯಕರು ಹಾಗೂ ಕರ್ನಾಟಕ ಜಾನಪದ ಅಕಾಡೆಮಿ ಅಧ್ಯಕ್ಷರಾದ ಡಾ. ಬಾನಂದೂರು ಕೆಂಪಯ್ಯನವರು ಕೃತಜ್ಞತಾ ನುಡಿಗಳಲ್ಲಿ 'ಪ್ರಾಚೀನ ಇತಿಹಾಸ ಹೊಂದಿರುವ ಶ್ರೀ ಸಿದ್ಧಗಂಗಮಠದ ಪರಮಪೂಜ್ಯ ಶ್ರೀ ಶ್ರೀ ಶ್ರೀ ಶಿವಕುಮಾರಸ್ವಾಮೀಜಿ ಅವರ ಪಾದಗಳಲ್ಲಿ ನಮಸ್ಕಾರ ಸಲ್ಲಿಸುತ್ತೇನೆ. ಇಂದಿನ ಈ ಸಭೆಯಲ್ಲಿ ಆಸೀನರಾಗಿರುವ ಪರಮೋಚ್ಚರೆ, ಮುಂದೆ ಕುಳಿತಿರುವ ಶ್ರೀಮಠದ ಭಕ್ತರೆ, ತಮಗೆಲ್ಲ ಶರಣು ಶರಣಾರ್ಥಿಗಳು. ಇಂದು ಶ್ರೀಮಠದ ಮಹಾಸನ್ನಿಧಿಯವರು **"ಜನಪದ ಚೂತವನ ಚೈತ್ರ"** ಪ್ರಶಸ್ತಿಯನ್ನು ನೀಡಿ ಆಶೀರ್ವಾದ ಮಾಡಿದ್ದಾರೆ. ಕೆಳಸ್ತರದ ದಲಿತ ಜನಪದ ಸಂಗೀತ ಕುಟುಂಬದಲ್ಲಿ ಕಲಾವಿದನಾಗಿ ಹುಟ್ಟಿ ಬೆಳೆದು ಬಂದಿರುವ ನನಗೆ ಶ್ರೀಮಠದ ಈ ಸರ್ವಶ್ರೇಷ್ಠ ಸನ್ಮಾನ



ಸಭಾಂಗಣದಲ್ಲಿ ಹರಗುರು ಚರಮೂರ್ತಿಗಳು







ಕಣ್ಮನಗಳನ್ನು ಸೆಳೆದ ಸಾಂಸ್ಕೃತಿಕ ಕಾರ್ಯಕ್ರಮ

ಮತ್ತು ನೀಡಿದ ಅಭಿನಂದನಾ ಪ್ರಶಸ್ತಿ ನನ್ನ ಕಲಾ ಬದುಕಿನಲ್ಲಿ ಹೊಸ ಹುರುಪು ನೀಡಿದೆ. ನನಗೆ ನಾಡಿನ ಉದ್ದಕ್ಕೂ ಗೌರವ, ಸನ್ಮಾನಗಳು ಲಭಿಸಿವೆ. ಆದರೆ ಈ ಶ್ರೀಮಠದ ಸನ್ಮಾನ ಒಂದು ಬಗೆಯ ನೋಬಲ್‌ಪಾರಿತೋಷಕದಂತೆ ಆಗಿರುತ್ತದೆ. ಶ್ರೀಮಠಕ್ಕೆ ಮಹಾಸನ್ನಿಧಿಯವರನ್ನು ನನ್ನ ಅಂತ್ಯದವರೆಗೂ ಸ್ಮರಿಸಿಕೊಳ್ಳುತ್ತೇನೆ.

ಐದಾರು ವರ್ಷಗಳ ಹಿಂದೆ ಮಕ್ಕಳ ದಿನಾಚರಣೆ ಅಂಗವಾಗಿ ಇದೇ ಶ್ರೀಮಠದಲ್ಲಿ ಮಹಾಸನ್ನಿಧಿ ಅವರ ಎದುರು ಹಾಡಿದ್ದು, ಶ್ರೀಗಳು ನನಗೆ ಶಾಲು ಹೊದಿಸಿ ಸನ್ಮಾನಿಸಿದ್ದನ್ನು ಇಂದು ಸ್ಮರಣೆ ಮಾಡಿಕೊಳ್ಳುತ್ತೇನೆ. ಇದರ ಮುಂದಿನ ಆಶೀರ್ವಾದವೇ ಈ ಸನ್ಮಾನ ಪ್ರಶಸ್ತಿ.

"ಜಾತಿ, ಮತ, ಭೇದಗಳನ್ನೆಲ್ಲ ಮೀರಿದ ಮಹಾಮಾನವ ತತ್ವಗಳನ್ನು ಸಾರುತ್ತಿರುವ ಹಾದಿನಲ್ಲಿ, ಬಸವಾದಿ ಶಿವಶರಣರ ಮೌಲ್ಯಗಳನ್ನು ಪ್ರಸಾರ ಮಾಡುತ್ತಿರುವ, ವಿದ್ಯೆ-ಅನ್ನದಾಸೋಹ ಮಾಡುತ್ತಿರುವ ಶ್ರೀಮಠದ ಸೇವೆ ಜಗತ್ ಪ್ರಸಿದ್ಧವಾದುದು. ಮಹಾದಾಸೋಹಿಗಳಾದ ಶ್ರೀಮಠದ ಮಹಾಸನ್ನಿಧಿಯವರು ಪ್ರದಾನ ಮಾಡಿರುವ ಈ ಸನ್ಮಾನ ಸದಾ ನನ್ನ ಎದೆಯಲ್ಲಿ ಇರುತ್ತದೆ. ಈ ಆಶೀರ್ವಾದದಿಂದ ನಾನು ಪುನೀತನಾಗಿದ್ದೇನೆ. ಮಹಾಸನ್ನಿಧಿಯವರ ಪಾದಗಳಲ್ಲಿ ಸದಾ ಸ್ಮರಣೆ ಸಲ್ಲಿಸುತ್ತೇನೆ. ಅದೇರೀತಿ ಶ್ರೀಮಠಕ್ಕೆ ನಡೆದುಕೊಳ್ಳುತ್ತೇನೆ" ಎಂದು ನುಡಿದರು.





ಶ್ರೀಮಠದಲ್ಲಿ ಪ್ರಸಾದ ಸ್ವೀಕರಿಸುತ್ತಿರುವ ಭಕ್ತರು









ಕಾರ್ಯಕ್ರಮ ಶ್ರೀ ಪಿ.ಎಸ್. ಸಿದ್ಧಗಂಗಯ್ಯನವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಶ್ರೀ ಕೆ.ಎಂ. ಚಂದ್ರ ಶೇಖರಯ್ಯನವರು ಎಲ್ಲರನ್ನು ಸ್ವಾಗತಿಸಿದರು. ಪ್ರೊ. ಹೆಚ್.ವಿ. ವೀರಭದ್ರಯ್ಯನವರು ಕಾರ್ಯಕ್ರಮ ನಿರ್ವಹಣೆ ಮಾಡಿದರು. ಕಾರ್ಯಕ್ರಮಕ್ಕೆ ಮುನ್ನ ಡಾ. ಬಾನಂದೂರು ಕೆಂಪಯ್ಯನವರು ಜನಪದ ಗೀತೆಗಳನ್ನು ಹಾಡಿ ರಂಜಿಸಿದರು.

### *ದಾಸೋಹ ವ್ಯವಸ್ಥೆ*

ಸಿದ್ಧಗಂಗಾ ಕ್ಷೇತ್ರ ದಾಸೋಹಕ್ಕೆ ಪ್ರಸಿದ್ಧವಾದುದು. ಶ್ರೀಮಠಕ್ಕೆ ಬಂದವರು ಪ್ರಸಾದ ಸ್ವೀಕರಿಸದೆ ಹೋಗುವುದು ತೀರ ವಿರಳ. ಈ ಸಲ ಸುಮಾರು ಎರಡು ಲಕ್ಷಕ್ಕೂ ಹೆಚ್ಚು ಜನರು ಸಮಾರಂಭಕ್ಕೆ ಸಾಕ್ಷಿಯಾದರು. ಪ್ರಸಾದಕ್ಕೆ ತೊಂದರೆಯಾಗದಿರಲಿ ಎಂದು ೧೨-೧೩ ಕಡೆ ವ್ಯವಸ್ಥೆ ಮಾಡಲಾಗಿತ್ತು. ಬೆಳಿಗ್ಗೆ ೬-೦೦ ಗಂಟೆಗೆ ಪ್ರಾರಂಭವಾದ ದಾಸೋಹ ರಾತ್ರಿ ಹನ್ನೊಂದು ಘಂಟೆಯವರೆಗೂ ನಿರಂತರವಾಗಿ ನಡೆಯಿತು.

ಬೆಳಿಗ್ಗೆ ಉಪಹಾರಕ್ಕೆ ಉಪ್ಪಿಟ್ಟು, ಕೇಸರಿಬಾತ್, ಕಾಫಿ, ಟೀ, ಮಾಡಿದರೆ ಮಧ್ಯಾಹ್ನ ಊಟಕ್ಕೆ ಪಾಯಸ, ಬೂಂದಿ, ಅನ್ನ, ಸಾಂಬಾರು, ಚಿತ್ರಾನ್ನ, ಮಜ್ಜಿಗೆ ಮೂರು ರೀತಿಯ ಪಲ್ಯ ವ್ಯವಸ್ಥೆ ಮಾಡಲಾಗಿತ್ತು. ಕಾರ್ಯಕ್ರಮದಲ್ಲಿ ಭಾಗಿಯಾಗಿ ಕಣ್ಣುಮನ ತುಂಬಿಸಿಕೊಂಡ ಭಕ್ತರು, ಅಭಿಮಾನಿಗಳು ಹೊಟ್ಟೆ ತುಂಬ ಊಟ ಮಾಡಿ ಪರಮಪೂಜ್ಯ ಶ್ರೀ ಶ್ರೀಗಳವರ ಸೇವೆಯನ್ನು ಮನದುಂಬಿ ಕೊಂಡಾಡಿ, ಅವರ ದರ್ಶನ ಭಾಗ್ಯ ಮತ್ತಷ್ಟು ವರ್ಷಗಳು ದೊರೆಯುವಂತಾಗಲಿ ಎಂದು ಭಗವಂತನನ್ನು ಪ್ರಾರ್ಥಿಸಿದರು.

ದಾಸೋಹ ವ್ಯವಸ್ಥೆ ಅಚ್ಚುಕಟ್ಟಾಗಿ ನಡೆಯಲು ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳ ಮಾರ್ಗ ದರ್ಶನದಲ್ಲಿ ವಿವಿಧ ಮಠಗಳ ಹರಗುರು ಚರಮೂರ್ತಿಗಳು ಶಿಕ್ಷಕರು, ಸ್ವಯಂಸೇವಕರು ವಹಿಸಿದ ಕಾಳಜಿ, ಪ್ರಾಮಾಣಿಕ ಸೇವೆ ಸದಾ ಸ್ಮರಣೀಯ. ಒಟ್ಟಾರೆ ಕಾರ್ಯಕ್ರಮ ಯಶಸ್ವಿಯಾಗಿ ನಡೆಯಲು ಹಗಲು-ರಾತ್ರಿ ದುಡಿದವರು, ಸಹಕಾರ ನೀಡಿದವರು ಬೆಂಗಳೂರಿನ ಫೆನೆಷಿಯಾ ಆಸ್ಪತ್ರೆಯ ವ್ಯವಸ್ಥಾಪಕ ನಿರ್ದೇಶಕರಾದ ಡಾ. ಸಿ. ಜಯಣ್ಣನವರು. ಅವರ ನೇತೃತ್ವದಲ್ಲಿ ನೂರಾರು ಜನ ಸ್ವಯಂ ಸೇವಕ ತಂಡ ದುಡಿಯಿತು. ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಮಾರ್ಗದರ್ಶನ ಮಠದ ಆಡಳಿತ ಮಂಡಳಿಯ ಸಹಕಾರವನ್ನು ಮರೆಯುವಂತಿಲ್ಲ. ಸಂಜೆ ಸ್ಥಳೀಯ ಕಲಾವಿದರಿಂದ ಸಾಂಸ್ಕೃತಿಕ ಕಾರ್ಯಕ್ರಮ ನಡೆಯಿತು. ಸಾವಿರಾರು ಜನ ಪ್ರೇಕ್ಷಕರು ಕಾರ್ಯಕ್ರಮ ವೀಕ್ಷಿಸಿ ಕಣ್ಮನಗಳನ್ನು ತುಂಬಿಸಿಕೊಂಡರು.

❑



# ಪರಮಪೂಜ್ಯರು ತಪೋಜೀವನ ಮತ್ತು ತ್ಯಾಗಜೀವನದ ಪ್ರತೀಕ

- ಪೂಜ್ಯ ಶ್ರೀ ಶ್ರೀ ಸಿದ್ದಲಿಂಗ ಮಹಾಸ್ವಾಮಿಗಳು
ಅಧ್ಯಕ್ಷರು, ಶ್ರೀ ಸಿದ್ಧಗಂಗಾ ಮಠ

ಬಂದೆಡೆಗಂಜದೆ ಧೈರ್ಯವನಿತ್ತು
ಹಿಂದುಮುಂದೆನ್ನ ಕಾಯ್ದಿರ್ಪ
ಭಕ್ತಜನ ಬಂಧುಶ್ರೀ ಗುರುವೆ ಕೃಪೆಯಾಗು

ಬಸವಾದಿ ಪ್ರಮಥರನ್ನ ಹರನ್ಮರದಲ್ಲಿ ಸ್ಮರಿಸಿಕೊಳ್ಳುತ್ತಾ ಆರಾಧ್ಯ ಗುರುದೇವರ ಭಕ್ತಿಯ ಭಾವಗಳಿಂದ ಅವರ ಚರಣಗಳಲ್ಲಿ ಸಾಷ್ಟಾಂಗ ಸಮರ್ಪಿಸಿ, ಸಮಾರಂಭದಲ್ಲಿ ಭಾಗಿಗಳಾಗಿರುವ ಶ್ರೀಮದ್ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರಲ್ಲಿ ಹಾಗೂ ಆದಿಚುಂಚನಗಿರಿಯ ಪೂಜ್ಯ ಜಗದ್ಗುರು ಬಾಲಗಂಗಾಧರನಾಥ ಮಹಾಸ್ವಾಮಿಗಳವರಲ್ಲಿ ಶರಣಾರ್ಥಿಯನ್ನು ಸಮರ್ಪಿಸಿ, ಭಾಗವಹಿಸಿದ ಎಲ್ಲ ಪೂಜ್ಯರಲ್ಲಿ ನಮಿಸಿ,

ಗಣ್ಯವ್ಯಕ್ತಿಗಳೇ, ಮಾತೆಯರೆ, ಮಹಿನೀಯರೆ, ಮಕ್ಕಳೆ, ಮಾಧ್ಯಮದವರೇ, ಇಂದು ನಾವೆಲ್ಲರೂ ಗುರುಗಳ ೧೦೪ನೇ ಜನ್ಮದಿನದ ಗುರುವಂದನೆ ಕಾರ್ಯಕ್ರಮದಲ್ಲಿ ಭಾಗಿಗಲಾಗಿದ್ದೇವೆ. ಏಪ್ರಿಲ್-೧ರಂದು ಅವರು ೧೦೩ ವರ್ಷಗಳನ್ನು ಪೂರೈಸಿ ೧೦೪ನೇ ವರ್ಷಕ್ಕೆ ಪದಾರ್ಪಣೆ ಮಾಡಿದ ಪವಿತ್ರ ನೆನಪಿನ ಸಂದರ್ಭವಾಗಿ ಇವತ್ತು ನಾವೆಲ್ಲ ಗುರುವಂದನೆ ಪ್ರತೀಕದ ಕಾರ್ಯಕ್ರಮವಾಗಿ ಆಚರಿಸುತ್ತಿದ್ದೇವೆ. ಈ ಸಂದರ್ಭದಲ್ಲಿ ಗೌರವಾನ್ವಿತ ಮುಖ್ಯ ಅತಿಥಿ ಶ್ರೀಮತಿ ಸೋನಿಯಾ ಗಾಂಧೀಜಿ ಅವರು ಈ ಕಾರ್ಯಕ್ರಮದಲ್ಲಿ ೧೦೪ ದೀಪಗಳನ್ನು ಹಚ್ಚುವುದರ ಮೂಲಕವಾಗಿ ಇದನ್ನು ಅತ್ಯಂತ ಅದ್ದೂರಿಯಾಗಿ ಉದ್ಘಾಟನೆ ಮಾಡಿದ್ದಾರೆ. ಅವರು ಹಚ್ಚಿದ ೧೦೪ ದೀಪಗಳೂ ಪರಮಪೂಜ್ಯರ ತಪೋ ಜೀವನದ, ತ್ಯಾಗಜೀವನದ ಪ್ರತೀಕಗಳಾಗಿವೆ. ಇಲ್ಲಿ ನಾವು ಕಾಣುವ ೧೦೪ ದೀಪಗಳು ಅಂದರೆ ನಮ್ಮ ಪರಮ ಪೂಜ್ಯರು ೧೦೪ ವರ್ಷಗಳೂ ಕೂಡ ಸಹಸ್ರ ಸಹಸ್ರ ಜ್ಯೋತಿಗಳನ್ನು ಮನೆಮನೆಗಳಲ್ಲಿ ಬೆಳಗಿಸುವಂತಹ ರೀತಿಯಲ್ಲಿ ತಮ್ಮ ಜೀವನವನ್ನು ಅರ್ಪಿಸಿಕೊಂಡಂತವರು. ಪರಮಪೂಜ್ಯರ ಸೇವೆಯ ಸ್ಫೂರ್ತಿ ಎಷ್ಟಿದೆ ಎಂಬುದಕ್ಕೆ ಒಂದು ಉದಾಹರಣೆ ಎಂದರೆ, ಮಾನ್ಯ ಎಸ್.ಎಂ.ಕೃಷ್ಣ ಅವರು ನಮ್ಮ ರಾಜ್ಯದ ಮುಖ್ಯಮಂತ್ರಿಗಳಾಗಿದ್ದಾಗ ಒಂದು ಜನಪ್ರಿಯ ಯೋಜನೆಯನ್ನು ಜಾರಿಗೆ ತಂದರು. ನಮ್ಮ ನಾಡಿನಲ್ಲಿ ಅಕ್ಷರ ಕ್ರಾಂತಿ ಆಗಬೇಕು, ಶೈಕ್ಷಣಿಕ ಪ್ರಭೆಯಾಗಬೇಕು ಅನ್ನುವ ಚಿಂತನೆಯಿಂದ ಅಕ್ಷರ ದಾಸೋಹವನ್ನು ಜಾರಿಗೆ ತಂದರು. ಅದಕ್ಕೆ ಮೂಲ ಪ್ರೇರಣೆ ನಮ್ಮ ಪರಮ ಪೂಜ್ಯ ಶಿವಕುಮಾರ ಮಹಾಸ್ವಾಮಿಗಳು ಎಂದು ಅವರು ವೇಲಿಂದ ವೇಲೆ ಹೇಳುತ್ತಿದ್ದರು.

ಇಂತಹ ಹಿನ್ನೆಲೆಯಲ್ಲಿ ಪೂಜ್ಯ ಗುರುದೇವರು ೧೦೪ ವರ್ಷಗಳಿಂದಲೂ ವಿದ್ಯಾರ್ಥಿಗಳ ಸೇವೆಯನ್ನು ಮಾಡಿಕೊಂಡು ಬರುತ್ತಿರುವವರು. ನಮ್ಮ ಭಾರತೀಯ ಪರಂಪರೆಯಲ್ಲಿ ಮಾತೃದೇವೋಭವ, ಪಿತೃದೇವೋಭವ, ಆಚಾರ್ಯ ದೇವೋಭವ, ಅತಿಥಿ ದೇವೋಭವ ಅಂತ ನಾವು ಕೇಳಿದ್ದೇವೆ, ಅದಕ್ಕೆ ಸ್ವಾಮಿ ವಿವೇಕಾನಂದರು ಒಂದನ್ನು ಸೇರಿಸುತ್ತಾರೆ; ದರಿದ್ರ ದೇವೋಭವ ಅಂತ. ಅದರ ಜೊತೆಗೆ ನಮ್ಮ ಪರಮಪೂಜ್ಯರು ಸೇರಿಸುವ ಒಂದು ಮಾತು ಎಂದರೆ, ವಿದ್ಯಾರ್ಥಿ ದೇವೋಭವ ಅಂತ. ಇದನ್ನು ನಾವು ಹೆಮ್ಮೆಯಿಂದ ಹೇಳಿಕೊಳ್ಳಬೇಕಾಗುತ್ತದೆ. ಅಂತಹ ಪರಮಪೂಜ್ಯರ ಜನ್ಮದಿನದ ಸಂಭ್ರಮದಲ್ಲಿ ನಾವೆಲ್ಲ ಇದ್ದೇವೆ. ಪ್ರೊ. ರಾಧಾಕೃಷ್ಣ ಅವರು ತಮ್ಮ ಮಾತಿನಲ್ಲಿ ಹೇಳುತ್ತಾರೆ; ನಮ್ಮ ಮಧ್ಯೆದಲ್ಲಿ ಇಂತಹ ಪರಮಪೂಜ್ಯರು, ಸಂತರು, ಮಹಂತರು ಇರೋದರಿಂದಲೇ ನಾಡಿನಲ್ಲಿ ನಾವೆಲ್ಲ ಶಾಂತಿಯಿಂದ, ನೆಮ್ಮದಿಯಿಂದ ಇದ್ದೇವೆ ಎಂದು. ಆ ನಿಟ್ಟಿನಲ್ಲಿ ನಮ್ಮ ಪರಮಪೂಜ್ಯರು ಸುಖ ನೆಮ್ಮದಿಗೆ ಕಾರಣರಾಗಿದ್ದಾರೆ ಎಂದು ಹೇಳಿಕೊಳ್ಳುವುದಕ್ಕೆ ನಮಗೆ ಸಂತೋಷವಾಗುತ್ತದೆ.

ಶಂಕರಾಚಾರ್ಯರು ಒಂದು ಕಡೆ ಹೇಳಿದ್ದಾರೆ: ಶಾಂತಚಿತ್ತರೂ, ಮನಸ್ಸಿನಲ್ಲಿ ಎಲ್ಲ ಭಾವಗಳ ವಿಶ್ರಾಂತಿಯನ್ನು ಹೊಂದಿದವರೂ ಆದ ಸತ್ಪುರುಷರು ತಾವೇ ಸ್ವಯಂ ಭಯಂಕರವಾದ ಸಂಸಾರ ಸಾಗರವನ್ನು ದಾಟಿದವರಾಗಿ, ಬೇರೆಯವರನ್ನು ಸಹ ನಿಮಿತ್ತವಿಲ್ಲದೇ ದಾಟಿಸುವವರಾಗಿ, ವಸಂತ







ಋತುವಿನಂತೆ ಲೋಕಕ್ಕೆ ಕಲ್ಯಾಣವನ್ನು ಉಂಟು ಮಾಡುತ್ತ ಬದುಕುತ್ತಾರೆ. ಅಂತಹ ಮಹಾತ್ಮರು ಲೋಕದ ಅನಿಮಿತ್ತ ಬಂಧುಗಳು- ಹೀಗೆಂದು ಹೇಳಿದ್ದಾರೆ. ನಮ್ಮ ಪರಮಪೂಜ್ಯರು ಕೂಡ ಅಂತಹ ಅನಿಮಿತ್ತ ಬಂಧುಗಳಾಗಿ ಈ ಸಮಾಜದ ಅನೇಕ ಅನಿಷ್ಟಗಳನ್ನು ಹೋಗಲಾಡಿಸುವುದರ ಮೂಲಕ ನಾಡಿಗೆ ಬೆಳಕನ್ನು ಕೊಟ್ಟಿರುವಂತವರು. ಅವರಿಗೆ ಅರ್ಪಿಸುವ ಗುರುವಂದನೆ ಏನೆಂದರೆ; ಅಖಂಡೇಶ್ವರರು ಒಂದು ವಚನದಲ್ಲಿ ಹೇಳುತ್ತಾರೆ;

*ಗುರು ಚರಣಂಗಳ ಪೂಜಿಸಿ ಎನ್ನ ಹಸ್ತಗಳು ಪರುಷವಾದವು*
*ಗುರು ಚರಣವ ನೋಡಿ ಎನ್ನ ಕಣ್ಣುಗಳು ಪರುಷವಾದವು*
*ಗುರು ಚರಣವ ಹಾಡಿ ಹರಸಿ ಎನ್ನ ಜಿಹ್ವೆ ಪರುಷವಾದವು*
*ಗುರು ಚರಣವ ಪೂಜಿಸಿ ಎನ್ನ ಮನ ಪರುಷವಾದವು ಅಖಂಡೇಶ್ವರ ।*

ಎನ್ನುವ ಮಾತನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬೇಕಾಗುತ್ತದೆ. ಇನ್ನೊಂದು ಸಂದರ್ಭದಲ್ಲಿ ಸರ್ವಜ್ಞಕವಿ ಹೇಳ್ತಾನೆ;

*ಗುರುವಿನಿಂದ ಬಂಧುಗಳು ಗುರುವಿನಿಂದ ದೈವಂಗಳು*
*ಗುರುವಿನಿಂದ ಬಂಧು, ಪುಣ್ಯಂಗಳು ಜಗವೆಲ್ಲ*
*ಗುರುವಿನಿಂದ ಮುಕ್ತಿ ಸರ್ವಜ್ಞ ।*

ಅನ್ನುವ ಹಾಗೆ ನಮಗೆ ಗುರುವೇ ಸರ್ವಸ್ವವಾಗಿರುವವರು. ಅವರ ಚರಣವನ್ನು ಪೂಜಿಸುವಂತಾದ್ದು, ಅವರು ತೋರಿದ ಮಾರ್ಗದಲ್ಲಿ ನಡೆಯುವಂತಾದ್ದೇ ನಮಗೆ, ನಾವು ಅವರಿಗೆ ಅರ್ಪಿಸುವ ದೊಡ್ಡ ಗುರುವಂದನೆ ಅಂತನ್ನಿಸಿಕೊಳ್ಳುತ್ತದೆ. ನಮ್ಮ ವೈಯಕ್ತಿಕ ಜೀವನವನ್ನು, ಸಾಮಾಜಿಕ ಜೀವನವನ್ನು ಸುಂದರಗೊಳಿಸಿಕೊಳ್ಳುವ ಕೆಲಸ ಮಾಡಿದರೆ ಅದು ನಿಜವಾದ ಅರ್ಥದಲ್ಲಿ ಗುರುವಂದನೆಯಾಗುತ್ತದೆ. ಗುರು ಶ್ರೀಗಳ ಶ್ರೀರಕ್ಷೆ, ಅವರ ಮಾರ್ಗದರ್ಶನ ನಮ್ಮನ್ನು ಸದಾ ಕೈಹಿಡಿದು ನಡೆಸಲಿ ಅಂತ ಗುರು ಪೂಜ್ಯರ ಪಾದಗಳಲ್ಲಿ ಅರ್ಪಿಸಬೇಕಾಗುತ್ತದೆ.

*ಕರುಣಾಳು ಬಾ ಬೆಳಕೆ ಕೈಹಿಡಿದು ನಡೆಸೆನ್ನನು*
*ಮುಸುಕಿದೀ ಮಬ್ಬಿನಲಿ*

ಅನ್ನುವ ಹಾಗೆ ಪೂಜ್ಯರು ನಮ್ಮನ್ನೆಲ್ಲ ಕೈಹಿಡಿದು ಬೆಳಕಿನಲ್ಲಿ ನಡೆಸುವಂತಹ ರೀತಿಯಲ್ಲಿ ಸದಾ ನಮ್ಮನ್ನು ರಕ್ಷಿಸಲಿ, ಅವರ ಆಶೀರ್ವಾದ ನಮ್ಮ ಮೇಲೆ ಇರಲಿ ಅನ್ನುವಂತಹ ಮಾತುಗಳಿಂದ ನನ್ನ ನುಡಿಪುಷ್ಪಗಳನ್ನು ಪೂಜ್ಯರ ಪಾದಗಳಿಗೆ ಅರ್ಪಿಸಿ ನನ್ನ ಈ ಮಾತುಗಳನ್ನು ಮುಗಿಸುತ್ತಿದ್ದೇನೆ. ❑

## ಶ್ರೀವಾಣಿ

ಜಗತ್ತು ವೇಗವಾಗಿ ಮುಂದುವರಿಯುತ್ತಿದೆ. ಊಹಿಸಲಾಗದು, ಕಲ್ಪಿಸಿಕೊಳ್ಳಬಾರದು. ನಮ್ಮ ಹಿರಿಯರಿಗೆ ಇಲ್ಲವಾಗಿದ್ದ
ಸೌಲಭ್ಯ ಇಂದು ನಮ್ಮದಾಗಿದೆ. ಆದರೆ ಶಾಂತಿಯಿಲ್ಲವಾಗಿದೆ. ಹಿಂದೆ ಶಾಂತಿಯಿತ್ತು, ಸೌಲಭ್ಯಗಳ ಅಭಾವವಿತ್ತು.
ಇತಿಹಾಸವನ್ನು ಅವಲೋಕಿಸಿದಾಗ ಸಾವಿರಾರು ರಾಜರು ಆಗಿಹೋಗಿದ್ದಾರೆ. ಅವರನ್ನಿಂದು ಯಾರೂ ಸ್ಮರಿಸುತ್ತಿಲ್ಲ. ಆ
ಇನ್ನೊಂದು ವರ್ಗದ ಜನರಿದ್ದಾರೆ. ಲೋಕಕ್ಕಾಗಿ ಬದುಕಿದವರು. ಅವರನ್ನಿಂದು ಸ್ಮರಿಸುತ್ತೇವೆ. ಲೋಕಪೂಜ್ಯ
ರಾಗಿದ್ದಾರೆ. ಯೇಸು, ಬುದ್ಧ, ಬಸವ, ಗಾಂಧಿ ಅವರು ಸ್ಮರಣಾರ್ಹರಾಗಿದ್ದಾರೆ. ಧರ್ಮ ಕೊಟ್ಟವರು. ಧರ್ಮ
ಸಂಕೋಚವಾದದ್ದಲ್ಲ. ವ್ಯಾಪಕವಾದದ್ದು. ವಿಜ್ಞಾನ ಮಹಾಶಕ್ತಿದಾಯಿನಿ ನಿಜ. ಹೊಸದಾಗಿ ಏನನ್ನೂ ಕೊಡಲಾಗದು.
ಇರುವುದರಿಂದಲೇ ಹೊಸದನ್ನು ಹೊರತೆ ತರುವ ಒಂದು ಮಾಧ್ಯಮ ವಿಜ್ಞಾನ. ಬಾಂಬು ವಿಜ್ಞಾನದ ಕೊಡುಗೆ.
ಆದರದು ವಿನಾಶಾತ್ಮಕ, ಬಂದದ್ದೇನು? ಧರ್ಮ ಆದೇಶ ಕೊಡುತ್ತಿದೆ. ಮನುಷ್ಯನಾಗಿ ಬಾಳು ಎಂದು ಹೇಳುತ್ತಿದೆ.
ದೇಶ ಸಾಲದ ಭಾರದಿಂದ ಕುಸಿದು ಬೀಳುತ್ತಿದೆ. ಬಸವಣ್ಣನವರು ದೊಡ್ಡ ವಿಚಾರವಾದಿ. ಜೀವನವನ್ನು ಸಮಗ್ರವಾಗಿ
ದರ್ಶನ ಮಾಡಿಕೊಂಡವರು. ಜೀವನ ಒಂದು ರತ್ನವಿದ್ದಂತೆ. ಅದನ್ನು ಗೌರವಿಸಬೇಕು; ಅರಿತು ಬಾಳಬೇಕು.
ಜೀವಿತಾವಧಿ ಪರಿಮಿತವಾದುದು. ಅಂತ್ಯ ಅನಿರೀಕ್ಷಿತವೆಂದು ಗ್ರಹಿಸಿ ಬಾಳಬೇಕು. ಬಸವಣ್ಣನವರ ಪ್ರಪಂಚ
ವಿಶ್ವಪ್ರಪಂಚ. ಮರ್ತ್ಯಲೋಕ ಮಾಯೆಯಲ್ಲ; ಕರ್ತಾರನ ಕಮ್ಮಟ. ಜಗತ್ತು ಮಹಾಶಕ್ತಿಯಿಂದ ವ್ಯಾಪಕವಾಗಿದೆ.
ಜೀವನ ಸೌಕರ್ಯಗಳು ಬೇಕು. ಬಸವಣ್ಣನವರು ಮಾಡಿದ ಬಹುದೊಡ್ಡ ಸಾಮಾಜಿಕ ಪರಿತರ್ವನೆಯೆಂದರೆ
ದುಡಿದು ಉಣ್ಣುವ ಸಂಸ್ಕೃತಿಯನ್ನು ನಿರ್ಮಾಣಮಾಡಿದ್ದು. ಬಸವತತ್ತ್ವಗಳು ಜಗತ್ತಿನ ಸಮಸ್ಯೆಗಳಿಗೆ
ಪರಿಹಾರಕೊಡಬಲ್ಲುವು. ಅವುಗಳನ್ನು ನಾವು ಆಚರಣೆಗೆ ತರಬೇಕು. ಅದರಿಂದ ನೆಮ್ಮದಿ.



# ಬಡಮಕ್ಕಳ ಜೀವನದ ಬೆಳಕು ಪೂಜ್ಯ ಶ್ರೀಗಳು

– ಜಗದ್ಗುರು ಡಾ. ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿ
ಆದಿಚುಂಚನಗಿರಿ ಮಹಾಸಂಸ್ಥಾನ.

*ಆದಿರುದ್ರಾ ನಮಸ್ತೆ ಸರ್ವಮಂಗಳದಾಯಿನಿ*
*ಸಚ್ಚಿದಾನಂದ ಭೂಮಾಲಿ ವಚೋಭೂಸಿತ ರೂಪಿಣಿ*

ಇವತ್ತಿನ ದಿನ ಗುರುಗಳ ೧೦೫ನೇ ವರ್ಷದ ಜನ್ಮದಿನವಾದ್ದರಿಂದ ಭಕ್ತಾದಿಗಳಿಗೆಲ್ಲ ಆನಂದ, ಸಂತೋಷ. ಅದಕ್ಕಾಗಿ ದೆಹಲಿಯಿಂದ ಆಶೀರ್ವಾದ ಪಡೆಯಲು ಬಂದಿರುವ ಸೋನಿಯಾ ಗಾಂಧೀಜಿ ಅವರು ಬಹಳ ದಿಟ್ಟ ಮನಸ್ಸುಳವರು. ಅಖಂಡ ಭಾರತವನ್ನು ಆಳತಕ್ಕಂತದ್ದರಲ್ಲಿ, ತಮ್ಮ ಎಲ್ಲ ವಿಧವಾದ ಸಾಮರ್ಥ್ಯವನ್ನು ಬಳಸಿ, ಎಲ್ಲರನ್ನೂ ಒಗ್ಗೂಡಿಸಿ ಅವರನ್ನು ದೇಶ ಸುಭದ್ರತೆ ಕಡೆಗೆ ತೆಗೆದುಕೊಂಡು ಹೋಗುವಂತಹ ಶಕ್ತಿ ಅವರಿಗಿದೆ ಎಂಬುದನ್ನು ಸಾಬೀತು ಮಾಡಿ ತೋರಿಸಿದ್ದಾರೆ. ಅವರು ಒಬ್ಬ ಮಹಿಳೆಯಾಗಿದ್ದೂ ದೇಶವನ್ನು ಕಟ್ಟೋದಿಕ್ಕೆ, ಇಡೀ ಭಾರತ ದೇಶದ ಭವಿಷತ್ತನ್ನು ರೂಪಿಸುವುದಕ್ಕೆ ಸಮರ್ಥರು ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಆದ್ದರಿಂದ ಅವರು ಬಂದು ಗುರುಗಳ ಆಶೀರ್ವಾದವನ್ನು ಪಡೆದು ಭಾರತ ದೇಶ ಭವ್ಯತೆಯಲ್ಲಿ ದಿವ್ಯತೆಯಲ್ಲಿ ಹಾಗೂ ಧಾರ್ಮಿಕ ವಿಚಾರಗಳಲ್ಲಿ, ಸಂಘಟನೆಯ ವಿಚಾರದಲ್ಲಿ ಹೇಗೆ ದೇಶವನ್ನು ಕಟ್ಟಬೇಕು ಮತ್ತು ಧಾರ್ಮಿಕ ವಿಚಾರಗಳಲ್ಲಿ ವಿಧಿ ವಿಧಾನಗಳು ಎಲ್ಲರ ಗೌರವಕ್ಕೆ ಸಲ್ಲುವಂತಾದ್ದು. ಆದ್ದರಿಂದ ತಾವೂ ಈ ಕಾರ್ಯಕ್ರಮದಲ್ಲಿ ಭಾಗವಹಿಸಿ ಅಭಿಮಾನಿಗಳನ್ನು ನೋಡಲು ಪ್ರೀತಿಯಿಂದ ಬಂದಿರುವ ಸೋನಿಯಾಜಿಯವರು, ಒಳ್ಳೆಯ ಕಾರ್ಯಕರ್ತರು. ಹಾಗೇ ಇಂದು ದೇಶ ಅವರ ಕಡೆಗೆ ನೋಡುತ್ತಿದೆ, ಅವರು ಮನಸ್ಸು ಮಾಡಿದರೆ ಏನು ಮಾಡಬಹುದು ಅಂತ. ಅಂತಹ ವ್ಯಕ್ತಿಯನ್ನು ನೋಡುವಂತಹ ಭಾಗ್ಯವನ್ನು ಸಿದ್ಧಗಂಗಾ ಸನ್ನಿಧಿ ಒದಗಿಸಿಕೊಟ್ಟಿದೆ.

ಅದೇ ರೀತಿಯಲ್ಲಿ ಪೂಜ್ಯ ಸಿದ್ಧಗಂಗಾ ಸ್ವಾಮೀಜಿಯವರು ಈಗಾಗಲೇ ಎಲ್ಲ ಹೇಳಿರುವ ಹಾಗೆ, ಅವರ ಶರೀರಕ್ಕೆ ನೂರಾಐದು ವರ್ಷಗಳಾಗಿರಬಹುದು. ಆದರೆ, ಅವರು ತಯಾರು ಮಾಡಿರುವಂತಹ ವಿದ್ಯಾರ್ಥಿಗಳ ಸಂಖ್ಯೆಯನ್ನು ಎಣಿಸಲಿಕ್ಕೇ ಬರುವುದಿಲ್ಲ. ನೀವು ಯಾವುದೇ ಕಚೇರಿಯಲ್ಲಿ ಕೇಳಿ, ಅಲ್ಲಿಯವರು ಹೇಳುವುದು 'ನಾನು ಸಿದ್ಧಗಂಗಾ ಮಠದಲ್ಲಿ ಓದಿದೋನು' ಅಂತ. ಅದನ್ನು ಹೇಳಿಕೊಳ್ಳುವುದಕ್ಕೆ ಅಲ್ಲಿನ ಅಧಿಕಾರಿಗಳಿಗೆ ತುಂಬಾ ಹೆಮ್ಮೆ. "ನಾನು ಸಿದ್ಧಗಂಗಾ ಮಠದಲ್ಲಿ ಓದಿ, ಬೆಳೆದು ಸಿದ್ಧಗಂಗಾ ಸ್ವಾಮಿಗಳ ಆಶೀರ್ವಾದವನ್ನು ಪಡೆದು, ಇವತ್ತು ಹಳ್ಳಿಯಲ್ಲಿದ್ದವನು ದಿಲ್ಲಿ ತನಕವೂ ಬಂದಿದ್ದೇನೆ' ಎನ್ನುವ ಅವರ ಭಾವುಕತೆಯನ್ನು ನೋಡಿದಾಗ ಎಲ್ಲರಿಗೂ ಸಂತೋಷವಾಗುತ್ತದೆ. ಹಾಗೇ ಅದೇ ರೀತಿಯಲ್ಲಿ ಸುತ್ತೂರು ಮಹಾ ಸನ್ನಿಧಿಯವರು ಸಹ, ಸ್ವದೇಶದಲ್ಲಿ ಮಾತ್ರವಲ್ಲದೆ ವಿದೇಶದಲ್ಲಿಯೂ ಕೂಡ ಹತ್ತಾರು ಸಂಸ್ಥೆಗಳನ್ನು ಕಟ್ಟಿ ವಿಶ್ವವಂದಿತರಾಗಿದ್ದಾರೆ. ಅವರು ಈ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಸ್ವಾಮಿಗಳ ಆಶೀರ್ವಾದ ಪಡೆಯಲಿಕ್ಕೆ, ನಿಮ್ಮ ಅಭಿಮಾನವನ್ನು ಪಡೆಯಲಿಕ್ಕಾಗಿ ಬಂದಿದ್ದಾರೆ. ಇದಲ್ಲದೆ ನಮ್ಮನ್ನು ಕೂಡ ಈ ಕಾರ್ಯಕ್ರಮಕ್ಕೆ ಬರುವಂತೆ ಕೇಳಿಕೊಂಡಿದ್ದು ಬಹಳ ಸಂತೋಷವಾಯಿತು. ಕಾರಣವೇನೆಂದರೆ, ಮೊದಲಿನಿಂದಲೂ ಸಿದ್ಧಗಂಗಾ ಮಹಾಸನ್ನಿಧಿಯವರು ಯಾವುದೇ ದೊಡ್ಡ ಕಾರ್ಯಕ್ರಮವನ್ನು ನಡೆಸುವ ಸಂದರ್ಭದಲ್ಲಿ ನಮ್ಮನ್ನು ಬಿಟ್ಟು ಮಾಡಲಿಲ್ಲ. ನಮ್ಮನ್ನು ಕಂಡಾಗೆಲ್ಲ ಅವರು ಪ್ರತಿಬಾರಿ ನಗುನಗುತ್ತಾ, *"ಚೆನ್ನಾಗಿದ್ದೀರಾ, ಮಳೆ ಹೇಗಿದೆ, ಬೆಳೆ ಹೇಗಿದೆ ಈ ವರ್ಷ, ಜನತೆಗೆ ಏನು ಅನುಕೂಲವಾಗಿದೆ ಈಸಾರಿ"* ಎನ್ನುತ್ತಾ ನೇರ ಜನರ ಮನಸ್ಸಿನ ಕಡೆಗೆ ಹೋಗುತ್ತಾರೆ. ಆದ್ದರಿಂದ ಅವರನ್ನು ನಾವು ಬಹಳ ಪ್ರೀತಿಸುತ್ತೇವೆ. ಅವರ ಮಾರ್ಗದಲ್ಲೇ ನಾವೂ ನಡೆದು, ವಿದ್ಯಾಭ್ಯಾಸ ಕೊಡುವುದು ಬಹಳ ಮುಖ್ಯ. ಆರೋಗ್ಯ, ಅಕ್ಷರ ಮತ್ತು ಅನ್ನದಾನ ಇವೆಲ್ಲ ಮುಖ್ಯವಾದುವು. ಜನತೆಗೆ ಬೇಕಾಗಿರುವಂತಾದ್ದು, ಹಳ್ಳಿ ಜನರನ್ನು ಜಾಗೃತಗೊಳಿಸಬೇಕಿದ್ದರೆ, ಅವರನ್ನು ವಿದ್ಯಾವಂತರನ್ನಾಗಿ ಮಾಡಬೇಕಿದ್ದರೆ, ಅವರಲ್ಲಿ ಒಳ್ಳೆಯ ಗುಣಗಳ ಬರುವಂತೆ ಮಾಡಬೇಕಿದ್ದರೆ ಮಠಗಳು ಆ ಕೆಲಸವನ್ನು ಮಾಡಬೇಕಾಗಿದೆ. ಅದನ್ನು ತೋರಿಸಿಕೊಟ್ಟವರು ಸಿದ್ಧಗಂಗಾ ಮಹಾಸನ್ನಿಧಿಯವರು. ಅವರ ದೀರ್ಘಾಯುಷ್ಯ ಇನ್ನಷ್ಟು ದೀರ್ಘಾಯುಷ್ಯ ಆಗಬೇಕು. ಇನ್ನಷ್ಟು ಬಡ ಮಕ್ಕಳು ಅವರ ಜೀವನವನ್ನು ಬೆಳಕಿಗೆ ತರಬೇಕು. ಮಕ್ಕಳ ಜೀವನ ಚೆನ್ನಾಗಿ ಆಗಬೇಕು ಎನ್ನುವ ಆಸೆ ಇಟ್ಟುಕೊಂಡವರು ಮಹಾಸನ್ನಿಧಿಯವರು. ದಿನೇ ದಿನೆ ಅವರ ಹಸನ್ಮುಖ ಜನರ ಕಡೆಗೆ ಹರೀತಾ ಇದೆ; ಬನ್ನಿ ವಿದ್ಯಾವಂತರಾಗಿ ಎಂದು ಕರೆಯುತ್ತಿರುವ ಈ ಸಂದರ್ಭದಲ್ಲಿ ಅವರ ಹುಟ್ಟುಹಬ್ಬವನ್ನು ಆಚರಿಸುತ್ತಿರುವುದು ನಮಗೆಲ್ಲ ಸಂತೋಷವನ್ನು ಉಂಟುಮಾಡಿದೆ. ಭಗವಂತ ಅವರಿಗೆ ಇನ್ನೂ ದೀರ್ಘಾಯುಷ್ಯವನ್ನು ಕೊಟ್ಟು, ಸೋನಿಯಾ ಗಾಂಧಿ ಅವರಿಂದ ದೆಹಲಿ ಮುಂತಾದ ಕಡೆ ಸಹಕಾರ ಸಿಗಲಿ, ಅಲ್ಲಿಯೂ ಬೆಳವಣಿಗೆ ಸಾಧಿಸುವಂತೆ ಆಗಲಿ ಎಂದು ತುಂಬು ಹೃದಯದಿಂದ ಹಾರೈಸುತ್ತೇನೆ. □







# ದೇಶದಲ್ಲಿ ಶಾಂತಿ ನೆಮ್ಮದಿ ನೆಲಸಲು ಪೂಜ್ಯರ ಮಾರ್ಗದರ್ಶನ ಬೇಕು

– ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು
ಜಗದ್ಗುರು ಶ್ರೀ ವೀರಸಿಂಹಾಸನ ಮಠ, ಸುತ್ತೂರು ಶ್ರೀಕ್ಷೇತ್ರ

*ಕರಿಯನಿತ್ತೊಡೆ ಒಲ್ಲೆ ಸಿರಿಯನಿತ್ತೊಡೆ ಒಲ್ಲೆ*
*ಹಿರಿದಪ್ಪ ರಾಜ್ಯವನಿತ್ತೊಡೆ ಒಲ್ಲೆ*
*ನಿಮ್ಮ ಶರಣರ ಸೂಳ್ನುಡಿಯ ವರಗಳಿಗಿತ್ತೊಡೆ ನಿಮ್ಮನಿತ್ತೇ ರಾಮನಾಥ*

ಸೋನಿಯಾ ಗಾಂಧಿ ಅವರು ಸಾಂಕೇತಿಕವಾಗಿ ೧೦೫ ದೀಪಗಳನ್ನು ಬೆಳಗುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದ್ದಾರೆ. ಪೂಜ್ಯ ಸಿದ್ಧಲಿಂಗ ಸ್ವಾಮೀಜಿಯವರು ಹೇಳಿದರು; ಈ ಪೂಜ್ಯರ ತ್ಯಾಗದ, ಸೇವೆಯ ದ್ಯೋತಕವಾಗಿ ಇಲ್ಲಿ ಪ್ರಜ್ವಲಿಸುತ್ತಿದೆ ಎಂದು. ಹಚ್ಚಿದ ದೀಪ ಕತ್ತಲೆಯನ್ನು ಹೋಗಲಾಡಿಸುತ್ತದೆ, ಬೆಳಕನ್ನು ಕೊಡುತ್ತದೆ, ಆದರೆ, ಎಣ್ಣೆಯನ್ನು ತೆಗೆದುಕೊಂಡು ಮುಟ್ಟಿಸಿದ ಜ್ಯೋತಿಯಿಂದ ಬೆಳಕನ್ನು ತೆಗೆದುಕೊಂಡ ಬತ್ತಿಗೆ ಗೊತ್ತಿರುತ್ತದೆ, ಉರಿಯುವಾಗ ಎಂಥಾ ನೋವಿರುತ್ತದೆ ಅಂತ. ಆ ನೋವನ್ನು ಪಡೆದು ಜನರಿಗೆ ಬೆಳಕನ್ನು ಕೊಡುತ್ತಲ್ಲ ಅದೇ ಜ್ಯೋತಿಯ ವಿಶೇಷ. ಅದನ್ನೇ ಸಿದ್ಧಗಂಗಾ ಶ್ರೀಗಳು ಎಂಭತ್ತು ವರುಷಗಳಿಂದ ನಿರಂತರವಾಗಿ ಮಾಡಿಕೊಂಡು ಬರುತ್ತಿದ್ದಾರೆ. ಇಡೀ ತಮ್ಮ ಬದುಕನ್ನು ತ್ಯಾಗಮಯವನ್ನಾಗಿ ಮಾಡಿಕೊಂಡು, ಆ ನೋವುಗಳನ್ನು ಪಡೆದುಕೊಂಡು ನಾಡಿಗೆ ಬೆಳಕನ್ನು ಕೊಡುವಂತೆ ಮಾಡಿದವರು ಮಹಾಪುರುಷರು ಪೂಜ್ಯ ಸಿದ್ಧಗಂಗಾ ಶ್ರೀಗಳವರು. ಪೂಜ್ಯ ಶ್ರೀಗಳು ೧೦೫ನೇ ವರ್ಷಕ್ಕೆ ಅಡಿ ಇಟ್ಟಿದ್ದಾರೆ. ಅವರು ಪೀಠವನ್ನು ಅಲಂಕರಿಸಿ ಎಂಭತ್ತು ವರ್ಷಗಳಾಗಿವೆ. ಇವತ್ತು ಒಂದು ಬೃಹತ್ ಸಮಾರಂಭದಲ್ಲಿ ರಾಷ್ಟ್ರದ ನಾಯಕಿಯಾದ ಸೋನಿಯಾ ಗಾಂಧಿ ಅವರ ಉಪಸ್ಥಿತಿಯಲ್ಲಿ ಈ ಕಾರ್ಯಕ್ರಮ ನಡೀತಾ ಇದೆ. ಈ ಮಠ, ಇಷ್ಟೆಲ್ಲ ಸಮೃದ್ಧವಾಗಿ ಬೆಳೆಯಲಿಕ್ಕೆ ಗೋಸಲ ಸಿದ್ಧೇಶ್ವರರ, ಯಡಿಯೂರು ಸಿದ್ಧಲಿಂಗೇಶ್ವರರ ಆಶೀರ್ವಾದವೇ ಕಾರಣ. ಈ ಮಠ ಧಾರ್ಮಿಕತೆಗೆ, ಆಧ್ಯಾತ್ಮಿಕತೆಗೆ ಅಪಾರವಾದ ಕೊಡುಗೆಯನ್ನು ಕೊಟ್ಟಿದೆ. ಅಡವಿ ಮಹಾಸ್ವಾಮಿ, ಉದ್ದಾನ ಶಿವಯೋಗಿಗಳು ಅವರೆಲ್ಲರ ಸಮರ್ಥ ಚೇತನವನ್ನು ಪಡೆದುಕೊಂಡು ಶಿವಕುಮಾರ ಶ್ರೀಗಳು ಸಿದ್ಧಗಂಗಾ ಮಠವನ್ನು ಜಾಗತಿಕ ಭೂಪಟದಲ್ಲಿ ಸ್ಥಿರವಾಗಿ ನಿಲ್ಲುವಂತೆ ಮಾಡಿರುವ ಕೀರ್ತಿಗೆ ಭಾಜನರಾಗುತ್ತಾರೆ.

ಇವತ್ತು ಮಠ ಇಷ್ಟೆಲ್ಲ ದೊಡ್ಡದಾಗಿ ಬೆಳೆದಿದೆ. ಆದರೆ, ಒಂದು ವಿಷಯವನ್ನು ಗಮನಕ್ಕೆ ತರಬೇಕು ಅಂದರೆ, ಉದ್ದಾನ ಶಿವಯೋಗಿಗಳು ಲಿಂಗೈಕ್ಯರಾದಾಗ, ಅವರ ಅಂತ್ಯ ಸಂಸ್ಕಾರಗಳೆಲ್ಲ ಮುಗಿದ ನಂತರ, ಅವರ ಮುಂದಿನ ಎಲ್ಲ ಕಾರ್ಯಗಳನ್ನು ನೆರವೇರಿಸಬೇಕಾಗಿರುತ್ತದೆ, ಆ ಕಾರ್ಯವನ್ನು ನಡೆಸುವಂತಹ ಹಣಕಾಸಿನ ಸೌಲಭ್ಯ ಮಠಕ್ಕೆ ಇರಲಿಲ್ಲ. ಆದರೆ, ಸ್ವಾಮೀಜಿಯವರು ಮಾತ್ರ ಯಾವುದೇ ರೀತಿಯಲ್ಲಿ ಕಂಗೆಟ್ಟಿರಲಿಲ್ಲ. ಆ ಸಂದರ್ಭದಲ್ಲಿ ಭಕ್ತನೊಬ್ಬ ನೀಡಿದ ನೂರು ಬೆಳ್ಳಿಯ ನಾಣ್ಯಗಳು ಆ ಎಲ್ಲ ಕೆಲಸಗಳನ್ನು ಮಾಡಲು ಅವಕಾಶವನ್ನು ಕಲ್ಪಿಸಿಕೊಡ್ತು. ಒಬ್ಬ ವ್ಯಕ್ತಿ ತಮ್ಮ ಬದುಕನ್ನು ಪೂಜಾ ನಿಷ್ಠೆಯಿಂದ ತಪೋ ನಿಷ್ಠೆಯಿಂದ ತೊಡಗಿಸಿಕೊಂಡರೆ ಸಮಾಜ ತನ್ನಷ್ಟಕ್ಕೆ ತಾನೇ ಆ ಸಮಯಕ್ಕೆ ಬೇಕಾದುದ್ದನ್ನು ಒದಗಿಸುತ್ತದೆ ಎನ್ನುವುದಕ್ಕೆ ಇದು ಒಳ್ಳೆಯ ನಿದರ್ಶನವಾಗಿದೆ.

*ತನುವಿನಲ್ಲಿ ನಿರ್ಮೋಹ ಮನದಲ್ಲಿ ನಿರಹಂಕಾರ*
*ಪ್ರಾಣದಲ್ಲಿ ನಿರ್ಭಯ ಚಿತ್ತದಲ್ಲಿ ನಿರಪೇಕ್ಷ*
*ವಿಷಯಗಳಲ್ಲಿ ಉದಾಸೀನ ಭಾವದಲ್ಲಿ ದಿಗಂಬರ*
*ಜ್ಞಾನದಲ್ಲಿ ಪರಮಾನಂದ ಎಡಗೊಂಡ ಬಳಿಕ*
*ಸೌರಾಷ್ಟ್ರ ಸೋಮೇಶ್ವರ ಲಿಂಗ ಬೇರಿಲ್ಲ ಕಾಣಿರೋ*

ಎಂಬುದನ್ನು ಮಾದಯ್ಯನವರು ೯೦೦ ವರ್ಷಗಳಷ್ಟು ಹಿಂದೆಯೇ ಪೂಜ್ಯ ಶ್ರೀ ಶಿವಕುಮಾರ ಸ್ವಾಮೀಜಿ ಅವರಿಗಾಗಿಯೇ ರಚಿಸಿದ್ದಾರೆ ಎನ್ನುವಷ್ಟು ಅರ್ಥಪೂರ್ಣವಾದ, ಮೌಲಿಕವಾದ ಜೀವನವನ್ನು ಪೂಜ್ಯ ಶ್ರೀಗಳು ಸವೆಸಿದ್ದಾರೆ.

ನಮ್ಮ ದೇಶ ಆಧ್ಯಾತ್ಮಿಕವಾಗಿ ಸಂಪದ್ಭರಿತವಾದಂತದ್ದು. ಈ ದೇಶಕ್ಕೆ ಸ್ವಾತಂತ್ರ ಬಂದು ಆರು ದಶಕಗಳು ಕಳೆದು ದೇಶ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದರೂ ಕೂಡ ಒಂದು ಶಾಂತಿ, ನೆಮ್ಮದಿ ಇರತಕ್ಕಂತಾದ್ದು ಆಧ್ಯಾತ್ಮಿಕ ಹಾಗೂ ಧಾರ್ಮಿಕ ಶಕ್ತಿಯಿಂದ ಎಂಬುದನ್ನು ಭಾರತೀಯರಾದ ನಾವೆಲ್ಲ ನಂಬಿರುವ ಸಂಗತಿ.

ಜಗತ್ತಿನಲ್ಲಿ ಅನೇಕ ಹೋರಾಟಗಳಾಗಿವೆ, ರಕ್ತಕ್ರಾಂತಿಯಾಗಿದೆ, ಮೌನಕ್ರಾಂತಿಯಾಗಿದೆ. ತಾನು ಇಡೀ ಜಗತ್ತನ್ನು ಆಕ್ರಮಿಸಿಕೊಳ್ಳಬೇಕು ಎನ್ನುವಂತ ಮನೋಭಾವದ ನೆಪೋಲಿಯನ್, ಕೊನೆಗೆ ಸೆರೆಮನೆಯಲ್ಲಿ ಇರುವಾದ ಆತ ಒಂದು ಮಾತು ಹೇಳುತ್ತಾನೆ; ನಾನು ಮತ್ತು ನನ್ನ ಅನೇಕ ಸನ್ಮಿತ್ರರು ಪರಾಕ್ರಮದಿಂದ ದೇಶಗಳ ಮೇಲೆ ದಾಳಿಯನ್ನು ಮಾಡಿ ನಾವು ಸಾಮ್ರಾಜ್ಯವನ್ನು ಸ್ಥಾಪಿಸಬೇಕು ಎಂದು ಮಾಡಿದೆವು. ಕೊನೆಗೆ ನಮ್ಮ ಸ್ಥಿತಿ ಏನಾಗಿದೆ ಎಂಬುದು ಗೊತ್ತಿದೆ; ನಾವು ಯಾರೇ ಕಟ್ಟಿದ ಸಾಮ್ರಾಜ್ಯ ಉಳೀಲಿಕ್ಕೆ ಸಾಧ್ಯವಿಲ್ಲ, ಆದರೆ, ಕ್ರಿಸ್ತನಂತಹ ಸಂತರು ಕಟ್ಟಿದಂತಹ ಆಧ್ಯಾತ್ಮಿಕ ಸೌಧವನ್ನು ಕೆಡವಲಿಕ್ಕೆ ಸಾಧ್ಯವಿಲ್ಲ, ಅದು ಯಾವತ್ತೂ ಶಾಶ್ವತವಾಗಿ ನಿಲ್ಲುವಂತಾದ್ದು ಎಂದು ನೆಪೋಲಿಯನ್ ಹೇಳುತ್ತಾನೆ.

ಪೂಜ್ಯ ಸಿದ್ದಗಂಗಾ ಶ್ರೀಗಳನ್ನು ಕುರಿತು ಹಿಂದಿನ ಇಬ್ಬರು ಮುಖ್ಯಮಂತ್ರಿಗಳು ಹೇಳಿದಂತಹ ಎರಡು ಮಾತನ್ನು ಹೇಳಲು ಬಯಸುತ್ತೇವೆ; ಜೆ.ಎಚ್. ಪಟೇಲರು ಮುಖ್ಯಮಂತ್ರಿಗಳಾಗಿದ್ದಾಗ ಇಲ್ಲಿನ ಕಾರ್ಯಕ್ರಮಕ್ಕೆ, ದಾಸೋಹ ಭವನದ ಉದ್ಘಾಟನೆಗೆ ಬಂದಾಗ ಒಂದು ಸಣ್ಣ ಪ್ರಸಂಗದ ಕಥೆಯನ್ನು ಹೇಳಿದರು; ಒಮ್ಮೆ ಐದು ಜನ ಸ್ನೇಹಿತರು ಸಂತನ ಒಡಗೂಡಿ ಒಂದು ಕಡೆ ಪ್ರಯಾಣ ಮಾಡುತ್ತಾ ಇರುತ್ತಾರೆ, ಆ ಪ್ರಯಾಣ ಮಾಡುವ ಸಂದರ್ಭದಲ್ಲಿ ಮಳೆ ಬೀಳುತ್ತದೆ. ಸಾಕಷ್ಟು ನೀರು ಸುರಿದಿದ್ದರಿಂದ ಮಾರ್ಗದಲ್ಲಿ ಆಶ್ರಯ ಪಡೆಯಲಿಕ್ಕೆ ಸಾಧ್ಯವಾಗುವುದಿಲ್ಲ. ಮುಂದೆ ಹೋಗುತ್ತಾ ಇರುವಾಗ ಒಂದು ಗುಡಿಸಲು ಸಿಗುತ್ತದೆ. ಅಲ್ಲಿ ಕೇವಲ ನಾಲ್ಕು ಜನ ಮಾತ್ರ ಇರಲಿಕ್ಕೆ ಅವಕಾಶವಿರುತ್ತದೆ. ಆಗ ನಾಲ್ಕು ಜನ ಮಾತ್ರ ಗುಡಿಸಲಲ್ಲಿ ನಿಂತುಕೊಳ್ಳುತ್ತಾರೆ, ಇನ್ನೊಬ್ಬ ಮರದ ಕೆಳಗೆ ಮಳೆಯಲ್ಲಿ ಅರ್ಧಕ್ಕರ್ಧ ನೆನಕೊಂಡು ನಿಂತಿರುತ್ತಾನೆ. ಆದರೆ, ಅವರು ಸ್ನೇಹಿತರು ಒಂದು ಷರತ್ತು ಮಾಡಿಕೊಳ್ಳುತ್ತಾರೆ, ಒಬ್ಬನೇ ಮಳೆಯಲ್ಲಿ ನೆನೆಯುವುದು ಸರಿಯಲ್ಲ, ಒಬ್ಬರಾದ ಮೇಲೆ ಒಬ್ಬರು ಮರದ ಕೆಳಗೆ ನಿಂತುಕೊಳ್ಳುವುದು ಎಂದು ಮಾತಾಡಿಕೊಳ್ಳುತ್ತಾರೆ. ಸರದಿಯಂತೆ ನಾಲ್ಕು ಜನ ಹೋಗಿ ನಿಂತುಕೊಳ್ಳುತ್ತಾರೆ. ಕೊನೆಯಲ್ಲಿ ಕೊನೆಯವನ ಸರದಿ ಬರುತ್ತದೆ, ಆತ ಸಂತನಾಗಿರುತ್ತಾನೆ. ಅವನ ಸರದಿಯಂತೆ ತಾನು ಹೋಗುತ್ತೇನೆ ಎಂದಾಗ ಒಬ್ಬ ಸ್ನೇಹಿತ ಹೇಳುತ್ತಾನೆ, "ಇಲ್ಲ ಇಲ್ಲ ನಾವು ನಾಲ್ಕು ಜನ ಲೌಕಿಕರು ನಾವು ಹೋದರೆ ಏನು ಆಗಲ್ಲ, ಮೊದಲೇ ನಾವು ನಿಂತಿರುವುದು ಮುರುಕಲು ಗುಡಿಸಲು, ನೀನು ಹೋದರೆ ಈ ಮುರುಕಲು ಗುಡಿಸಲು ಬಿದ್ದುಬಿಡುತ್ತದೆ, ಆಗ ನಾವೆಲ್ಲ ನೆನೀಬೇಕಾಗುತ್ತದೆ, ಹಾಗಾಗಿ ನೀನು ಹೋಗಬೇಡ" ಎನ್ನುತ್ತಾನೆ. ಆದರೆ, ಇನ್ನುಳಿದ ಸ್ನೇಹಿತರು ಹೇಳ್ತಾರೆ ನೀನು ಹೋಗಬೇಕು ಅಂತ. ಸಂತ ಗುಡಿಸಲು ಬಿಟ್ಟು ಹೊರಟ ಕೂಡಲೇ ಗುಡಿಸಲು ಮುರಿದು ಬೀಳುತ್ತದೆ. ಆಗ ಪಟೇಲರು ಹೇಳಿದ್ದೇನೆಂದರೆ, ನೀವು ಇರೋದರಿಂದಲೇ ಸಮಾಜ ನೆಮ್ಮದಿಯಾಗಿದೆ, ಹಾಗಾಗಿ ನೀವು ಯಾವಾಗಲೂ ನಮ್ಮ ಜೊತೆಗೇ ಇರಬೇಕು. ನೀವು ಇರೋದರಿಂದ ಆ ಗುಡಿಸಲು ಹೇಗೆ ಮಳೆ ಆಶ್ರಯವನ್ನು ಕೊಟ್ಟಿತೋ ಹಾಗೆ ನಾವೂ ನೆಮ್ಮದಿಯಾಗಿರುತ್ತೇವೆ ಎಂಬ ಮಾತನ್ನು ಹೇಳಿದರು.

ಹಿಂದಿನ ಮುಖ್ಯಮಂತ್ರಿಯಾಗಿದ್ದ ಎಸ್.ಎಂ.ಕೃಷ್ಣ ಅವರು ಶ್ರೀಮಠದ ಭಕ್ತರು ಕೂಡ. ಅವರು ಶ್ರೀಗಳ ಹುಟ್ಟುಹಬ್ಬಕ್ಕೆ ಬಂದಂತಹ ಸಂದರ್ಭದಲ್ಲಿ ಒಂದು ಮಾತನ್ನು ಹೇಳುತ್ತಾರೆ; ನಾವೆಲ್ಲ ಶ್ರೀಮಠದ ಬಗ್ಗೆ ಅಪಾರವಾದ ಭಕ್ತಿ ಗೌರವದಿಂದ ನಡೆದುಕೊಳ್ಳುತ್ತೇವೆ, ಶ್ರೀಗಳು ದೀರ್ಘ ಆಯುಷ್ಯ, ಆರೋಗ್ಯ ಎಲ್ಲವನ್ನು ಪಡೆದುಕೊಂಡಿದ್ದಾರೆ, ಆದ್ದರಿಂದ ನಾವೆಲ್ಲ ಶ್ರೀಗಳಿಗೆ ಕೊಡಬಹುದಾದ ಕೊಡುಗೆ, ಭಗವಂತನಲ್ಲಿ ಮಾಡತಕ್ಕಂತಹ ಪ್ರಾರ್ಥನೆ ಏನೆಂದರೆ, ನಮ್ಮೆಲ್ಲರ ಒಂದು ದಿನದ ಆಯುಷ್ಯವನ್ನು ಸ್ವಾಮೀಜಿಯವರಿಗೆ ಕೊಟ್ಟುಬಿಡಪ್ಪಾ ನಾವೆಲ್ಲ ಸಂತೋಷವಾಗಿ ಇರುತ್ತೇವೆ ಅಂತ ಹೇಳುತ್ತಾರೆ. ಬಹುಶಃ ನಾವೆಲ್ಲ ಭಗವಂತನಲ್ಲಿ ಅಂತಹುದೊಂದು ಪ್ರಾರ್ಥನೆಯನ್ನು ಮಾಡಿದರೆ, ಪೂಜ್ಯರು ಹೀಗೆ ದೀರ್ಘ ಕಾಲ ಸಮಾಜವನ್ನು ಆಶೀರ್ವದಿಸಲಿಕ್ಕೆ ಸಾಧ್ಯವಾಗುತ್ತದೆ.

ಎಲ್ಲ ಕ್ರಿಕೆಟ್ ಜ್ವರದ ಯುಗವಿದು. ಎಲ್ಲಿ ಟೀವಿ ಹಾಕಿದರೂ ಕ್ರಿಕೆಟ್ ನೋಡುತ್ತಾ ಇರುತ್ತಾರೆ, ಕ್ರಿಕೆಟ್ ಜ್ವರದ ಬಗ್ಗೆ ಹುಚ್ಚಿರುತ್ತದೆ. ಸಾಮಾನ್ಯವಾಗಿ ಒಬ್ಬ ಆಟಗಾರ ಶತಕ ಬಾರಿಸುವಾಗ ಅವನೂ ತುದಿಗಾಲಲ್ಲಿ ನಿಂತಿರುತ್ತಾನೆ, ಅವನಿಗೆ ಗಾಬರಿ ಇರುತ್ತೋ ಗೊತ್ತಿಲ್ಲ, ನೋಡೋರಿಗೆ ಮಾತ್ರ ಯಾವಾಗ ಶತಕ ಭಾರಿಸುತ್ತಾನೆ ಎಂದು. ಒಂದೊಂದು ರನ್ ಹೊಡೆಯುವಾಗಲೂ ಆತಂಕದಿಂದ ಇರುತ್ತಾರೆ. ಅದು ೭೦-೮೦ ರನ್ ದಾಟಿದ ಮೇಲಂತೂ ಕ್ರಿಕೆಟ್ ಆಡುವವರಿಗೆ ಟೆನ್ಷನ್ ಇರುವುದಿಲ್ಲ, ನೋಡೋವರಿಗೆ ಟೆನ್ಷನ್ ಇರುತ್ತದೆ. ಆಟಗಾರ ನೂರು ಹೊಡೆದ ಅಂದರೆ ಎಲ್ಲ ಸಂತೋಷ ಪಡುತ್ತಾರೆ. ನಾವು ಇದನ್ನು ಶತಮಾನೋತ್ಸವದ ಸಂದರ್ಭದಲ್ಲಿಯೂ ಹೇಳಿದ್ದೇವೆ. ಕೆಲವರಿಗೆ ನೆನಪಿರಬಹುದು, ಸೆಂಚುರಿಯನ್ನು ಬಾರಿಸಿಯಾಗಿದೆ, ಅದಾದ ಮೇಲೆ ಒಂದು ಬೌಂಡರಿಯನ್ನು ಕೂಡ ಬಾರಿಸಿದ್ದಾರೆ. ಇವತ್ತು ನೂರು ಪ್ಲಸ್ ನಾಲ್ಕು ನೂರಾನಾಲ್ಕು ಆಗಿದೆ. ಆದ್ದರಿಂದ ಭಗವಂತನಿಗೆ ಬಹಳ ಕೊಡು ಅಂತ ಒಂದೇ ಸಾರಿ ಕೇಳುವುದು ಬೇಡ. ಒಂದು ಬೌಂಡರಿಯನ್ನು ಕೊಡಲಿ, ಅಥವಾ ಒಂದು ಸಿಕ್ಸರ್‌ನ್ನು ದಯಪಾಲಿಸಲಿ, ಬೌಂಡರಿ ಕೊಟ್ಟರೆ ನೂರಾ ಎಂಟಾಗುತ್ತದೆ, ಸಿಕ್ಸರ್ ಕೊಟ್ಟರೆ ನೂರಾಹತ್ತಾಗುತ್ತದೆ. ಹಾಗಂತ ನಾವು ಭಗವಂತನಲ್ಲಿ ಕೇಳಿಕೊಳ್ಳೋಣ, ಭಗವಂತ ಅವರಿಗೆ ಈ ರೀತಿ ದೀರ್ಘ ಆಯುಷ್ಯವನ್ನು ಕೊಟ್ಟು ಸಮಾಜಕ್ಕೆ ಸೇವೆಯನ್ನು ಸಲ್ಲಿಸುವಂತಹ ಅವಕಾಶವನ್ನು ಕಲ್ಪಿಸಬೇಕು ಎಂದು ಪ್ರಾರ್ಥಿಸಿಕೊಳ್ಳುತ್ತೇವೆ.

ಸಿಂಪಿಯವರು ಒಂದು ಮಾತನ್ನು ಹೇಳುತ್ತಾರೆ;

*ವೇದೋಪನಿಷತ್ತು ಅರೆದು ಕುಡಿದು ಅರಗಿಸಿಕೊಂಡವರು ಇರಬಹುದು*
*ಸಾವಿರಾರು ಪುಟಗಳ ಕಾವ್ಯಪುರಾಣವನ್ನು ಬರೆದವರು ಇರಬಹುದು*
*ರತ್ನಖಚಿತ ಕಿರೀಟವನ್ನು ಧರಿಸಿ ಮೆರವಣಿಗೆ ಮಾಡಿಕೊಂಡವರು ಇರಬಹುದು*
*ನೋಬೆಲ್ ಪ್ರಶಸ್ತಿಯ ಪಡೆದು ನೋಬೆಲ್ ಅನಿಸಿಕೊಂಡವರು ಇರಬಹುದು*
*ಇಂದ್ರರು ಚಂದ್ರರು ಕುಬೇರರು ಇರಬಹುದು*
*ನಿಮ್ಮಂತೆ ಬಡ ವಿದ್ಯಾರ್ಥಿಗಳ ಕಲ್ಯಾಣಕೆ ದೇಹ-ಮನ ಸವೆಸಿದವರು ಎಲ್ಲಿಹರಯ್ಯ*

- ಎನ್ನುವ ಮಾತನ್ನು ಅವರು ಬಹಳ ಅರ್ಥಪೂರ್ಣವಾಗಿ ಹೇಳುತ್ತಾರೆ.

*ಹಸಿದವರಿಗೆ ಅನ್ನವನು, ಅಜ್ಞರಿಗೆ ಜ್ಞಾನವನು*
*ಧಾರೆ ಧಾರೆಯಾಗಿ ಸುರಿವ ಕಾಯಕ ನಿರತ*
*ಬಳಿಗೆ ಬಂದವರನ್ನೆಲ್ಲ ನಮ್ಮವರು ನಮ್ಮವರು ಎನುತ*
*ಬರಸೆಳೆದಪ್ಪಿದ ಮಾತೃಹೃದಯಿ*
*ಜಾತಿ ಅಡ್ಡ ಗೋಡೆಗಳನು ಕಿತ್ತೊಗೆದ*
*ಮಾನವೀಯತೆ ಮೆರೆದ ಮಹಾತಪಸ್ವಿ*

ಎನ್ನುವಂತಹ ಮಾತನ್ನು ರಾಚಪ್ಪನವರು ಬರೆಯುತ್ತಾರೆ. ಹೀಗೆ ಕವಿಪುಂಗವರಿಂದ, ಸಾಹಿತಿಗಳಿಂದ ತಮ್ಮ ಸೇವೆಯ ಕಾರಣಗಳಿಂದ ಅವರನ್ನು, ಸೇವೆಯನ್ನು ಗೌರವಿಸಲು ಹೊರಟ ಪೂಜ್ಯ ಶಿವಕುಮಾರ ಮಹಾಸ್ವಾಮಿಗಳ ೧೦೫ನೇ ಗುರುವಂದನೆ ಕಾರ್ಯಕ್ರಮದಲ್ಲಿ ನಾವೆಲ್ಲ ಸಂತೋಷದಿಂದ ಸೇರಿದ್ದೇವೆ.

ಕಾರ್ಯಕ್ರಮಕ್ಕೆ ವಿಶೇಷವಾಗಿ ದೆಹಲಿಯಿಂದ ಸೋನಿಯಾ ಗಾಂಧಿ ಅವರು ಬಂದಿದ್ದಾರೆ. She came all the way from Delhi to take part in this function . This morning She also visited drought area and will hope that Karnataka will get some remedy for people who are suffering now. ನಮ್ಮ ಈ ಆಧ್ಯಾತ್ಮಿಕ ದೇಶದಲ್ಲಿ ಭಯೋತ್ಪಾದನೆ ಅಥವಾ ಭಯ ಹುಟ್ಟಿಸುವಂತಹ ವಾತಾವರಣ ನಿರ್ಮಾಣವಾಗಿದೆ ಅವೆಲ್ಲವೂ ನಿವಾರಣೆಯಾಗಬೇಕಿದೆ, ದೇಶದಲ್ಲಿ ಶಾಂತಿ ನೆಮ್ಮದಿ ನೆಲೆಸಬೇಕಾಗಿದೆ. ಮನುಷ್ಯರು ದುಷ್ಕೃತ್ಯಗಳಿಂದ ಬಿಡುಗಡೆ ಪಡೆದುಕೊಂಡು ಶಾಂತಿಪಥದಲ್ಲಿ ನಡೆಬೇಕಾಗಿದೆ. ಅಂತಹ ದಿನಮಾನ ಈ ಸಂದರ್ಭದಲ್ಲಿ ಹೇಳಲು ಬಯಸುತ್ತೇವೆ.

*ದುರ್ಜನಾಹ ಸಜ್ಜನೋ ಭೂಯಾತಃ*
*ಸಜ್ಜನಾಹ ಶಾಂತಿ ಮಾಪ್ನಿಯಾಃ*
*ಶಾಂತೋ ಮುಚ್ಚೇತ ಬಂಧ್ಯಭ್ಯೋ*
*ಮುಕ್ತಸ್ಚಾನ್ಯ ವಿಮೋಚಯೇತಃ*

ದುರ್ಜನರು ಸಜ್ಜನರಾಗಲಿ, ಸಜ್ಜನರಿಗೆ ಶಾಂತಿ ಲಭಿಸಲು ಶಾಂತರು ಬಂಧಮುಕ್ತರಾಗಲಿ ಎಂಬ ಮಾತನ್ನು ಹೇಳಿ, ಪೂಜ್ಯ ಆದಿಚುಂಚನಗಿರಿ ಜಗದ್ಗುರು ಮಹಾಸ್ವಾಮಿಗಳವರು ಈ ಕಾರ್ಯಕ್ರಮಕ್ಕೆ ಆಗಮಿಸಿ ಶುಭವನ್ನು ಕೋರಿರುವಂತಾದ್ದು ಅರ್ಥಪೂರ್ಣವಾದದ್ದು ಎಂಬ ಮಾತನ್ನು ಹೇಳಿ, ಪೂಜ್ಯರಿಗೆ ದೀರ್ಘ ಆಯುರಾರೋಗ್ಯವನ್ನು ಮತ್ತು ಸಕಲರಿಗೆ ಸನ್ಮಂಗಳವನ್ನು ಉಂಟುಮಾಡಲಿ ಅಂತ ಹೇಳಿ ನನ್ನ ನಾಲ್ಕು ಮಾತುಗಳನ್ನು ಮುಗಿಸುತ್ತೇನೆ.

**(ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ ವಹಿಸಿ ನೀಡಿದ ನುಡಿ ನಮನ)**

## ಶ್ರೀವಾಣಿ

ಸರ್ಕಾರದ ವಾಹನಗಳು, ಸರ್ಕಾರದ ಇಂಧನ ಯಥೇಚ್ಛವಾಗಿ ಖರ್ಚಾಗುತ್ತಿದೆ. ಇಂದು ಅಧಿಕಾರಿಗಳು, ರಾಜಕಾರಣಿಗಳು ತಮ್ಮ ಸ್ವಂತ ಕೆಲಸಕ್ಕೂ ಸರ್ಕಾರದ ವಾಹನ ಉಪಯೋಗಿಸುತ್ತಿರುವುದು ದುರದೃಷ್ಟಕರ. ಹಿಂದೆ ಎಂಥ ಪ್ರಾಮಾಣಿಕತೆ ಇತ್ತು, ಎಂಥ ಕರ್ತವ್ಯ ಪ್ರಜ್ಞೆ ಇತ್ತು ; ಎಂಥ ರಾಷ್ಟ್ರಪ್ರೇಮ ಇತ್ತು ಎಂಬ ವಿಚಾರವನ್ನು ಪ್ರತಿಯೊಬ್ಬರೂ ಅರ್ಥಮಾಡಿಕೊಳ್ಳಬೇಕು. ಇದೆಲ್ಲವನ್ನು ಚಾಣಕ್ಯನನ್ನು ನೋಡಿ ಕಲಿಯಬೇಕು. ಅವನು ಇಡೀ ರಾಷ್ಟ್ರಕ್ಕೆ ಮಾದರಿಯಾಗಿದ್ದನು. ಅವನು ಒಂದು ಸಾಧಾರಣ ಮನೆಯಲ್ಲಿ ವಾಸಮಾಡುತ್ತಿದ್ದ. ಚಾಪೆ ಬಿಟ್ಟರೆ ಮತ್ತೊಂದಿರಲಿಲ್ಲ. ಅವನು ಎಷ್ಟರ ಮಟ್ಟಿಗೆ ಆಳ್ವಿಕೆ ಮಾಡುತ್ತಾ ಇದ್ದ ; ಎಷ್ಟು ವಿಚಾರವಂತನಾಗಿದ್ದ, ಪ್ರಾಮಾಣಿಕನಾಗಿದ್ದ, ಎಷ್ಟು ಸರಳ ಜೀವನ ನಡೆಸುತ್ತಿದ್ದ ಎಂಬುದನ್ನು ತಿಳಿದು ನಡೆಯಬೇಕು.

# Benediction by His Holiness Dr. Sree Sree Shivakumara Swamiji on the occasion of 105th Birthday Celebration

The Chief guest of the morning' programme Smt. Sonia Gandhiji, various dignitaries present, thousands of devotees who have come from various parts of the country.

By the grace of God, it has been possible for me to complete 104years in the service of poor rural children of the country. I was initiated into the Virakthashram in the year 1930 by my Guruji Sree Uddana Swamiji. Realizing the importance of education for development, my Guruji has started a Sanskrit Shool in the year 1917 with about 20 students alongwith free boarding house but without discrimation of caste, creed or religion.

I had to assume the full responsibility of the Math in 1941 when my mentor attained his heavenly abode. By that time, the student strength of the Gurukul was about 200. During the last six decades, thanks to the cooperation and help received from the philanthropic public. The Math has grown to the level of supporting nearly 9000 children with free food, shelter and education without any discrimination of caste, creed or religion. The development is totally INLCUSIVE. All the children of the Gurukul, sit together, eat together and learn together. It has been possible for the Siddaganga Education Society to establish more than 120 schools and colleges mostly in rural areas, supporting the education of more than fortyfive thousand children.

I have witnessed the performance of various Governments and Administrations under the Maharajas of Mysore state before independance. The erstwhile Mysore state had the good fortune of being led by statesman like Mr. M. Visvesvaraya who was a brilliant Engineer with impeccable character.

We are the largest democracy in the world. Our democratically elected Governments have done fairly well in creating infrastructure necessary for the develeopment if various industries, food production, education system etc., At the same time our population has increased four fold during the last 60 years.

We have our excellent constitution created by brilliant minds like Dr. Ambedkar and other scholars. They expected that people responsible to run the government would follow the constitution in letter and spirit. But somehow, things have happened not exactly that way.

Nepotism, greed on the part of many responsible persons have resulted in the widening of the gap between the rich and poor. This has created an unstable situation in the society. Can we afford to ignore the showing up of Naxalism in various parts of the country? I recall here a famous quote of President Kennedy : *'If a free society can not help the many who are poor, it can not save the few who are rich'.*





I am optimist. I feel confident that our great country with spirituality as the master key of the Indian mind, will be able to through up youngsters who can lead the country on the right path. In this context, I quote Aurobindo Ghose : "The Renaissance in India" Prabharak Publishing House, Chandernagore(1921) pp 12-15)

'Spirituality is indeed the master-key of the Indian mind; the sense of the infinite to it. Spirituality does not flourish on earth in the void. When we look at the pasts of India, what strikes is her stupendous vitality, her inexhaustible power of life and joy of life, her almost unimaginable prolific creativeness. For three thousand years atleast, -it is indeed much longer- she has been creating abundantly and incessantly, lavishly, with an inexhaustible many-sidedness, republics and kingdoms and empires, philosophies and cosmologies and sciences and creeds and arts and poems and all kinds of monuments, palaces and temples and public works, communities and societies and religious orders, laws and codes and rituals, physical sciences, systems of Yoga, systems of politics and administration, arts spiritual, arts worldly, trades, industries, fine arts, - the list is endless and in each item there is almost a plethora of activity. She creates and creates and is not satisfied and not tired; she will not have an end of it, seems hardly to need a space for rest, a time for inertia and hanging fallow. She expands too outside her borders; her ships cross the ocean and the fine superfulity of her wealth brims over to Judea and Egypt and Rome; her colonies spread her arts and epics and creeds in the Archipelago; her traces are found in the sands of Mesopotamia; her religions conquer China and Japan and spread westward as far as Palestine and Alexandria, and the figures of the Upanishads and the sayings of the Buddhists are reechoed on the lips of Christ. Every where there is the teeming of a super abundant energy of life at the back of which is supreme spirituality. Thus, an ingrained and dominant spirituality, an enexhaustible vital creativeness and gust of life and, mediating between them, a powerful, penentrating and scrupulous intelligence combined of the rational, ethical and aesthetic mind each at a high intensity of action, crated the harmony of the ancient Indian culture'

Inspite of breath-taking developments in science and technology, people all over the world are yearing for peace in the face of terrorism, violence, strife, hunger an so many other ills. The only possible soultion is for the man to accept and cultivate the paths of spirituality and Dharma, irrespective of his nationality or religion.

Let me also explain, Spirituality does not mean moving away from worldly responsibilities. It advocates active life, but based on universal brotherhood, honesty, integrity and compassion for all.

Sometimes, I dream of a National Government in the country under the leadership of the wisest and the best from all parties working for the progress of all the country.

We are all happy that Smt. Soniaji has made it convenient to visit our Math. May God bless her with good health and happiness.

May God bless you all

**(Sree Sree Shivakumara Swamigalu)**
Sree Siddaganga Math



# ಆಧ್ಯಾತ್ಮಿಕ ಪ್ರವೃತ್ತಿ ಮತ್ತು ಧಾರ್ಮಿಕ ಭಾವನೆಗಳನ್ನು ಬೆಳೆಸಿಕೊಳ್ಳಬೇಕು

- ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಶ್ರೀ ಸಿದ್ಧಗಂಗಾ ಕ್ಷೇತ್ರ

ಹರಗುರು ಚರಮೂರ್ತಿಗಳಲ್ಲಿ ವಂದನೆಗಳು.

ಇಂದಿನ ಬೆಳಗಿನ ಕಾರ್ಯಕ್ರಮದ ಮುಖ್ಯ ಅತಿಥಿಗಳಾದ ತಾಯಿ ಶ್ರೀಮತಿ ಸೋನಿಯಾಗಾಂಧೀಜಿಯವರೇ, ನೆರೆದಿರುವ ಅನೇಕ ಸನ್ಮಾನ್ಯ ಸಭಾಸದನರೆ, ನಾಡಿನ ಅನೇಕ ಕಡೆಗಳಿಂದ ಆಗಮಿಸಿರುವ ಸಾವಿರಾರು ಭಕ್ತಾಧಿಗಳೇ ನಿಮ್ಮೆಲ್ಲರಿಗೂ ಶುಭವಾಗಲಿ.

ನಾಡಿನ ಬಡ ಗ್ರಾಮೀಣ ವಿದ್ಯಾರ್ಥಿಗಳ ಸೇವೆಯಲ್ಲಿ ೧೦೪ ವರ್ಷಗಳ ಅವಧಿಯನ್ನು ಪೂರೈಸಲು ದೇವರ ಅನುಗ್ರಹದಿಂದ ನನಗೆ ಸಾಧ್ಯವಾಗಿದೆ. ೧೯೩೦ರಲ್ಲಿ ನನ್ನ ಗುರೂಜಿ ಶ್ರೀ ಉದ್ದಾನ ಶಿವಯೋಗಿ ಸ್ವಾಮೀಜಿಯವರಿಂದ ನಾನು ವಿರಕ್ತಾಶ್ರಮ ದೀಕ್ಷೆಯನ್ನು ಕೈಗೊಂಡೆ. ಅಭಿವೃದ್ಧಿ ಹೊಂದಲು ಶಿಕ್ಷಣದ ಪ್ರಾಮುಖ್ಯತೆ ಎಷ್ಟೆಂಬುದನ್ನು ಮನಗಂಡಿದ್ದ ನನ್ನ ಗುರೂಜಿಯವರು, ಜಾತಿ, ಮತ, ಧರ್ಮಗಳ ಭೇದವೆಣಿಸದೆ ೧೯೧೭ರಲ್ಲಿ ಸುಮಾರು ೨೦ ವಿದ್ಯಾರ್ಥಿಗಳಿಂದ ಕೂಡಿದ, ಉಚಿತ ಭೋಜನ ವ್ಯವಸ್ಥೆಯ ನಿಲಯದ ಸಹಿತ ಸಂಸ್ಕೃತ ಶಾಲೆಯೊಂದನ್ನು ಪ್ರಾರಂಭಿಸಿದರು.

ನನ್ನ ಪೂಜ್ಯ ಮಾರ್ಗದರ್ಶಕರು ೧೯೪೧ರಲ್ಲಿ ಸ್ವರ್ಗವಾಸಿಗಳಾದ ನಂತರ ಮಠದ ಸಂಪೂರ್ಣ ಜವಾಬ್ದಾರಿಯನ್ನು ನಾನೇ ವಹಿಸಿಕೊಳ್ಳಬೇಕಾಯಿತು. ಅಷ್ಟು ಹೊತ್ತಿಗಾಗಲೇ ಗುರುಕುಲದ ವಿದ್ಯಾರ್ಥಿಗಳ ಸಂಖ್ಯೆ ೨೦೦ರಷ್ಟಾಗಿತ್ತು. ಧಾರಾಳ ಸ್ವಭಾವದ ಸಾಮಾಜಿಕರ ನೆರವು ಮತ್ತು ಸಹಕಾರ ದೊರೆತುದರಿಂದ ಕಳೆದ ಆರು ದಶಕಗಳ ಅವಧಿಯಲ್ಲಿ ಮಠವು ಸುಮಾರು ೯೦೦೦ ಮಕ್ಕಳಿಗೆ ಮತ, ಧರ್ಮ, ಪಂಗಡಗಳ ಭೇದವಿಲ್ಲದಂತೆ ಉಚಿತವಾಗಿ ಆಹಾರ, ವಸತಿ ಮತ್ತು ಶಿಕ್ಷಣವನ್ನು ನೀಡುವಷ್ಟರ ಮಟ್ಟಿಗೆ ಬೆಳೆದು ನಿಂತಿದೆ. ಈ ಅಭಿವೃದ್ಧಿಯಲ್ಲಿ ಇವೆಲ್ಲವೂ ಒಳಗೊಂಡಿವೆ. ಗುರುಕುಲದಲ್ಲಿರುವ ಎಲ್ಲಾ ವಿದ್ಯಾರ್ಥಿಗಳೂ ಜೊತೆಯಾಗಿ ಕುಳಿತು, ಜೊತೆಯಾಗಿ ಊಟಮಾಡಿ ಜೊತೆಯಾಗಿ ಕಲಿಯುತ್ತಾರೆ. ಸಿದ್ಧಗಂಗಾ ಶಿಕ್ಷಣ ಸಂಸ್ಥೆಯು ೧೨೦ಕ್ಕಿಂತಲೂ ಅಧಿಕವಾಗಿ, ಶಾಲೆ ಮತ್ತು ಕಾಲೇಜುಗಳನ್ನು ಸ್ಥಾಪಿಸುವುದರ ಮೂಲಕ, ಅದರಲ್ಲಿಯೂ ಗ್ರಾಮ ಪ್ರದೇಶಗಳಲ್ಲಿ ನಲವತ್ತೈದು ಸಾವಿರಕ್ಕೂ ಮಿಗಿಲಾಗಿ ಮಕ್ಕಳಿಗೆ ಶೈಕ್ಷಣಿಕ ನೆರವು ನೀಡುತ್ತಿದೆ.

ಸ್ವಾತಂತ್ರ್ಯಕ್ಕೂ ಮುನ್ನ ಮೈಸೂರು ಮಹಾರಾಜರುಗಳ ಆಡಳಿತಾವಧಿಯಲ್ಲಿ ಅನೇಕ ಸರ್ಕಾರಗಳ ವೈವಿಧ್ಯಮಯ ಅಡಳಿತಗಳನ್ನು ಕಂಡಿದ್ದೇನೆ. ಸರ್.ಎಂ. ವಿಶ್ವೇಶ್ವರಯ್ಯನವರಂತಹ ಪ್ರತಿಭಾವಂತ ಇಂಜಿನಿಯರ್ ಮತ್ತು ಅತಿಶ್ರೇಷ್ಠ ಗುಣವಂತರಾದ, ರಾಜನೀತಿ ನಿಪುಣರಾದಂತವರ ಆಡಳಿತವನ್ನು ಈ ಮುಂಚೆ ಇದ್ದಂತಹ ಮೈಸೂರು ರಾಜ್ಯ ಹೊಂದಿತ್ತು.

ಜಗತ್ತಿನಲ್ಲಿಯೇ ನಮ್ಮದು ಅತ್ಯಂತ ಹಿರಿಯ ಪ್ರಜಾಪ್ರಭುತ್ವ. ವಿವಿಧ ಕೈಗಾರಿಕೆಗಳು, ಆಹಾರೋತ್ಪಾದನೆ, ಶೈಕ್ಷಣಿಕ ರೀತಿ ನೀತಿ ಮೊದಲಾದವುಗಳ ಬೆಳವಣಿಗೆಗಾಗಿ ಮೂಲಾವಶ್ಯಕತೆಗಳನ್ನು ವೃದ್ಧಿಪಡಿಸಲು, ಪ್ರಜಾಪ್ರಭುತ್ವ ರೀತಿಯಲ್ಲಿ ಆರಿಸಲ್ಪಟ್ಟಿರುವ ನಮ್ಮ ಸರ್ಕಾರಗಳು ಸಾಕಷ್ಟು ಉತ್ತಮ ರೀತಿಯಲ್ಲಿ ಕೆಲಸ ಮಾಡಿವೆ. ಅದರೊಡನೆಯೆ ಕಳೆದ ೬೦ ವರ್ಷಗಳಲ್ಲಿ ನಮ್ಮ ಜನಸಂಖ್ಯೆಯು ನಾಲ್ಕು ಪಟ್ಟು ಹೆಚ್ಚಾಗಿ ವೃದ್ಧಿಗೊಂಡಿದೆ. ಡಾ|| ಅಂಬೇಡ್ಕರ್ ಮತ್ತು ಇತರ ಮೇಧಾವಿಗಳು ರಚಿಸಿದ ಅತ್ಯುತ್ತಮವಾದ ಸಂವಿಧಾನವು ನಮ್ಮದಾಗಿದೆ. ಸರ್ಕಾರವನ್ನು ನಡೆಸಬಲ್ಲ ಜನ ಜವಾಬ್ದಾರಿಯಿಂದ ಈ ರಾಜ್ಯಾಂಗವನ್ನು ಅಕ್ಷರಷಃ ಅನುಸರಿಸುವರೆಂದು ಅವರೆಲ್ಲ ನಿರೀಕ್ಷಿಸಿದ್ದರು. ಆದರೆ ಅವರ ಅಪೇಕ್ಷೆಯಂತೆಯೇ ಎಲ್ಲವೂ ನಡೆದಿಲ್ಲ.

ಸ್ವಜನಪಕ್ಷಪಾತ, ದುರಾಸೆ ಇವುಗಳಿಂದ ಕೂಡಿದ ಕೆಲವು ಜವಾಬ್ದಾರಿಯುತ ವ್ಯಕ್ತಿಗಳಿಂದಾಗಿ ಶ್ರೀಮಂತರು ಮತ್ತು ಬಡವರ ನಡುವೆ ಇರುವ ಅಂತರ ಅಗಾಧವಾಗಿ ಬೆಳೆಯುತ್ತಿದೆ. ಅದು ಸಾಮಾಜಿಕವಾಗಿ ಅಭದ್ರತೆಯ ಸನ್ನಿವೇಶವನ್ನು ಸೃಷ್ಟಿಸಿದೆ. ಈ ಕಾರಣದಿಂದಾಗಿ ನಾಡಿನ ಅನೇಕ ಭಾಗಗಳಲ್ಲಿ ಕಂಡು ಬರುತ್ತಿರುವ ನಕ್ಸಲಿಸಂನ್ನು ನಾವು ಕಡೆಗಾಣಿಸದಿರಲು ಸಾಧ್ಯವೇ? ಈ ಸಂದರ್ಭದಲ್ಲಿ ಅಧ್ಯಕ್ಷ ಕೆನಡಿಯವರ ಒಂದು ಉಕ್ತಿಯು ನೆನಪಿಗೆ ಬರುತ್ತದೆ. *'ಬಹುಮಂದಿ ಬಡವರಿಗೆ ನೆರವು ನೀಡಲಾರದ ಒಂದು ಸಮಾಜ, ಕೆಲವು ಶ್ರೀಮಂತರನ್ನು ರಕ್ಷಿಸಲಾರದು'.*

ನಾನೊಬ್ಬ ಸತ್‌ಪ್ರತೀಕ್ಷಕ ಆಧ್ಯಾತ್ಮಿಕತೆಯನ್ನು ಪ್ರಮುಖ ಅಂಶವನ್ನಾಗಿ ಪರಿಗಣಿಸಿರುವ ಈ ಬೃಹದ್ರಾಷ್ಟ್ರದಲ್ಲಿನ ಭಾರತೀಯ ಮನಸ್ಸು ನಾಡನ್ನು ಸರಿಯಾದ ಮಾರ್ಗದಲ್ಲಿ ಕೊಂಡೊಯ್ಯಬಲ್ಲ ಯುವಕರನ್ನು ದೃಷ್ಟಿಸಬಲ್ಲದೆಂದುದರಲ್ಲಿ ನನಗೆ ಸಂಪೂರ್ಣ ನಂಬಿಕೆ





ಇದೆ. ಈ ಸಂದರ್ಭದಲ್ಲಿ ಅರವಿಂದ ಘೋಷ್‌ರವರನ್ನು ನಾನು ಉಲ್ಲೇಖಿಸುತ್ತೇನೆ. (The 'Renaissance in India', Prabhartak Publishing house, Chandernagore (1921) PP12-15)

'ಆಧ್ಯಾತ್ಮಿಕತೆ ಎನ್ನುವುದು ಭಾರತೀಯ ಮನೋಸ್ಥಿತಿಯ ಒಂದು ಪ್ರಮುಖ ಅಂಶ. ಅದಕ್ಕೆ ಕೊನೆ ಎಂಬುದೇ ಇಲ್ಲ. ಶೂನ್ಯದಲ್ಲಿ ಅದು ಬರುವುದಿಲ್ಲ. ಭಾರತದ ಪ್ರಾಚೀನತೆಯನ್ನು ಕುರಿತು ಗಮನಿಸಿದರೆ, ನಮ್ಮ ಗಮನಕ್ಕೆ ಬರುವೆಂದರೆ ಅದರ ಮಹತ್ತಾದ ಜೀವನ ಶಕ್ತಿ, ಅದು ಹೊಂದಿರುವ, ಅಂತ್ಯವಿಲ್ಲದ ಜೀವನ ಮತ್ತು ಅವಿನಾಶಿ ಜೀವನ ಸ್ಫೂರ್ತಿ ಮತ್ತು ಅದರ ಫಲವಾಗಿ ದೊರಕುವ ಆನಂದ ಜೊತೆಗೆ ಊಹಿಸಲು ಆಗದಂತಹ ಸೃಜನಾತ್ಮಕ ಶಕ್ತಿ, ಕಡೆಯ ಪಕ್ಷ ಮೂರು ಸಾವಿರ ವರ್ಷಗಳ ಅದು ಇನ್ನೂ ದೀರ್ಘಾವಧಿಯ ದೆನ್ನಬಹುದು. ಈ ಅವಧಿಯಲ್ಲಿ ದೇಶ ಊಹಿಸಲು ಆಗದಂತಹ ರೀತಿಯಲ್ಲಿ ನಾನಾ ದಿಕ್ಕುಗಳಲ್ಲಿ ಏಕಪ್ರಕಾರವಾಗಿ ಕೊನೆಯಿಲ್ಲದಂತೆ ಪ್ರಗತಿ ಹೊಂದುತ್ತಿದೆ. ಜನತಂತ್ರ, ರಾಜರ ಆಳ್ವಿಕೆ, ಸಾಮ್ರಾಜ್ಯಗಳು, ತತ್ವಜ್ಞಾನ, ವಿಶ್ವಜ್ಞಾನ, ವಿಜ್ಞಾನ, ಧಾರ್ಮಿಕ ತತ್ತ್ವಗಳು, ಕಲೆ ಮತ್ತು ವಿಶ್ವಕಾವ್ಯಗಳು, ಸಾರ್ವಕಾಲಿಕ ಸ್ಮಾರಕಗಳು, ಕಾವ್ಯ ಕಲೆ ಇತ್ಯಾದಿಗಳು, ಅರಮನೆಗಳು, ದೇವಾಲಯ ಮುಂತಾದ ಭವ್ಯ ಭವನಗಳು ಸಾಮಾಜಿಕ ವ್ಯವಸ್ಥೆ, ಧರ್ಮಗಳ ವಿಧಾನಗಳು, ಕಾನೂನು ಬದ್ಧ ಜೀವನ ವ್ಯವಸ್ಥೆ, ಧಾರ್ಮಿಕ ವಿಧಿವಿಧಾನಗಳು, ಭೌತಿಕ ವಿಜ್ಞಾನದ ರೂಪು ರೇಖೆಗಳು, ಯೋಗ, ರಾಜಕೀಯ ವ್ಯವಸ್ಥೆ, ಆಡಳಿತವ್ಯವಸ್ಥೆ, ಆಧ್ಯಾತ್ಮಿಕ ಹಾಗೂ ಇಹಪರಗಳೆರಡಕ್ಕೂ ಸಂಬಂಧಪಟ್ಟ ವಿಧಿವಿಧಾನಗಳು, ಕೈಗಾರಿಕೆ ಹಾಗೂ ಕುಶಲಕಲೆಗಳಿಗೆ ಸಂಬಂಧಪಟ್ಟ ಹಾಗೂ ಪ್ರಾಪಂಚಿಕ ವ್ಯವಹಾರಗಳಿಗೆ ಅನುಕೂಲವಾದಂತಹ ವಿಷಯಗಳು, ಧಾರ್ಮಿಕ, ಕಲಾತ್ಮಕ, ಔದ್ಯೋಗಿಕ, ವಾಣಿಜ್ಯ ಹೀಗೆ ಈ ಪಟ್ಟಿಗೆ ಕೊನೆ ಎಂಬುದೇ ಇಲ್ಲ. ಈ ರೀತಿ ಪ್ರತಿಯೊಂದು ವಿಷಯಗಳಲ್ಲಿಯೂ ಕಾರ್ಯಕ್ಷೇತ್ರದ ಬೆಳವಣಿಗೆಯಾಗಿದೆ. ಆವಿಷ್ಕಾರದ ಹಿಂದೆ ಆವಿಷ್ಕಾರಗಳಾದರೂ, ಅಷ್ಟಕ್ಕೇ ತೃಪ್ತಿಪಟ್ಟುಕೊಂಡು ಸುಮ್ಮನಾಗುತ್ತಿಲ್ಲ. ಮಾಡುವ ಪ್ರಯತ್ನಗಳಿಗೆ ಅಂತ್ಯವೆಂಬುದೇ ಇಲ್ಲ. ವಿಶ್ರಾಂತಿಗೆ ಕಾಲಾವಕಾಶವೆಂಬುದಾಗಲಿ ಅಥವಾ ಕೊನೆ ಎಂಬುದಾಗಲೀ ಇಲ್ಲ, ಅಥವಾ ಬಿಡುವೆಂಬುದೇ ಗೊತ್ತಿಲ್ಲ. ತನ್ನ ಎಲ್ಲೆಯನ್ನು ಮೀರಿ ಕಾರ್ಯಸಾಧನೆ ನಡೆದಿದೆ. ನಾಡಿನ ಎಲ್ಲೆಯನ್ನು ದಾಟಿ ನಮ್ಮ ನೌಕೆಗಳು ಸಾಗರದಾಚೆ ಸಾಗಿವೆ. ನಾಡಿನ ಸಂಪತ್ತು ಹಾಗೂ ಉತ್ಪತ್ತಿ, ಯಹೂದಿ ರಾಷ್ಟ್ರಗಳು, ಈಜಿಪ್ಟ್, ರೋಮ್ ದೇಶಗಳಿಗೆ ತಲುಪಿವೆ. ನಾಡಿನಕಲೆ, ಪುರಾಣಗಳು ಮತ್ತು ಧಾರ್ಮಿಕ ಸಂಬಂಧ ವಿಷಯಗಳು ಪ್ರಪಂಚದ ದ್ವೀಪ ಸಮುದಾಯಗಳಿಗೂ ಹರಡಿ ಬೇರೂರಿವೆ. ಮೆಸಪೊಟೇಮಿಯದಂತಹ ದೇಶಗಳಲ್ಲಿ ಮಣ್ಣಿನೊಡನೆ ಬೆರೆತುಕೊಂಡಿವೆ. ಭಾರತೀಯ ಮತ ಧರ್ಮ ಸಿದ್ಧಾಂತಗಳು ಚೀನಾ, ಜಪಾನ್‌ಗಳಲ್ಲಿ ಬೇರೂರಿ, ಪಶ್ಚಿಮದಲ್ಲಿ ಪ್ಯಾಲೆಸ್ತೇನ್ ಮತ್ತು ಲೆಕ್ಸಾಂಡ್ರಿಯಾಗಳವರೆಗೂ ಹರಡಿವೆ. ಉಪನಿಷತ್ತುಗಳ ಮತ್ತು ಬೌದ್ಧಧರ್ಮದ ರೂಪುರೇಷೆಗಳು ಕ್ರಿಸ್ತನ ಕೃತಿಗಳಲ್ಲಿ ಸಹ ಪುನರುಚ್ಛಾರಗೊಂಡಿವೆ. ಎಲ್ಲೆಡೆಯೂ ಶಕ್ತಿಯುತವಾದ ಅಗಾಧ ಜೀವಚೈತನ್ಯವು ಉಕ್ಕಿ ಅದ್ಭುತವಾಗಿ ಹರಿಯುತ್ತಿದೆ. ಅದಕ್ಕೆ ಬೆಂಬಲವಾಗಿರುವುದು ಅತಿಶ್ರೇಷ್ಠವೆನಿಸಿದ ಉನ್ನತ ಮಟ್ಟದ ಆಧ್ಯಾತ್ಮಿಕತೆ. ಈ ರೀತಿ ಎದ್ದು ಕಾಣುವ ಆದರೆ ಹಾಸು ಹೊಕ್ಕಾಗಿರುವ ಆಧ್ಯಾತ್ಮಿಕ ಗುಣ, ಕುಗ್ಗಿಹೋಗದಂತಹ, ಶಾಶ್ವತವಾಗಿರುವಂತಹ ಧಾರ್ಮಿಕ ಪ್ರವೃತ್ತಿ, ಜೀವನೋತ್ಸಾಹ, ಧ್ಯಾನಾಸಕ್ತ ಗುಣ, ಇವುಗಳ ನಡುವೆ, ಸಮರ್ಥವಾದ, ಎಲ್ಲವನ್ನೂ ಅರಿಯಬಲ್ಲ, ಆಳವಾಗಿ ಚಿಂತಿಸಬಲ್ಲ ಮನಸ್ಸು, ಅದರ ಜೊತೆಗೆ ಸೈದ್ಧಾಂತಿಕವಾಗಿ ಚಿಂತನೆ ನಡೆಸುವ ನೈತಿಕ ಮನಸ್ಸು, ಈ ಎಲ್ಲಾ ಗುಣಗಳು ಒಟ್ಟಾಗಿ ಸೇರಿ ಒಂದು ಏಕಲಯದ ಸುಂದರವಾದ ಪುರಾತನ ಭಾರತದ ಸಂಸ್ಕೃತಿಯನ್ನು ಸೃಷ್ಟಿಮಾಡಿದುವು.

ವೈಜ್ಞಾನಿಕ ರಂಗದಲ್ಲಿ ಅಚ್ಚರಿ ಮೂಡಿಸುವಂತಹ ತಾಂತ್ರಿಕ ಅಭಿವೃದ್ಧಿ ಕಾರ್ಯಗಳು ನಡೆದಿದ್ದರೂ ಸಹ ಇಡೀ ಜಗತ್ತಿನಲ್ಲಿ ಭಯೋತ್ಪಾದನೆ, ಹಿಂಸಾಪ್ರವೃತ್ತಿ, ಘರ್ಷಣೆ, ಹಸಿವು ಮತ್ತು ಇಂಥವೇ ಅನೇಕ ಅಸ್ವಸ್ಥ ಸಮಸ್ಯೆಗಳ ಎದುರಿನಲ್ಲಿ ಜನ, ಶಾಂತಿ, ಸೌಖ್ಯಗಳನ್ನು ಬಯಸಿ ಹಾತೊರೆಯುತ್ತಿದ್ದಾರೆ. ಇದಕ್ಕೆಲ್ಲ ಮಾನವನಿಗೆ ಉಳಿದಿರುವ ಏಕೈಕ ಪರಿಹಾರವೆಂದರೆ, ಆಧ್ಯಾತ್ಮಿಕ ಪ್ರವೃತ್ತಿ ಮತ್ತು ಧಾರ್ಮಿಕ ಮನೋಭಾವಗಳನ್ನು ತನ್ನ ರಾಷ್ಟ್ರೀಯತೆ ಅಥವಾ ಮತಧರ್ಮವನ್ನು ಮರೆತು ಬೆಳಸಿಕೊಳ್ಳುವುದು.

ನಾನು ಅದನ್ನು ಸ್ಪಷ್ಟಪಡಿಸಲು ಬಯಸುತ್ತೇನೆ. ಆಧ್ಯಾತ್ಮಿಕ ಪ್ರವೃತ್ತಿ ಎಂದರೆ ಪ್ರಾಪಂಚಿಕ ಜವಾಬ್ದಾರಿಗಳಿಂದ ವಿಮುಖರಾಗುವುದೆಂದು ಅರ್ಥವಲ್ಲ. ಆದರೆ ಹಾಗೆಂದರೆ ವಿಶ್ವಭ್ರಾತೃತ್ವದ ಮೇಲೆ ಅವಲಂಬಿತವಾದ ಕ್ರಿಯಾಪೂರ್ಣ ಜೀವನವನ್ನು ನಡೆಸುವುದು, ಸತ್ಯಸಂಧತೆ, ಪರಿಪೂರ್ಣ ವ್ಯಕ್ತಿತ್ವ ಮತ್ತು ವಿಶ್ವಮಾನವಪ್ರೇಮ ಇವುಗಳನ್ನು ವೃದ್ಧಿಸಿಕೊಳ್ಳುವುದು. ನಾಡಿನಲ್ಲಿನ ಸರ್ವರ ಏಳಿಗೆಗಾಗಿ ದುಡಿಯಬಲ್ಲ ಬುದ್ಧಿವಂತ ಮತ್ತು ಅತ್ಯುತ್ತಮನೆನಿಸಿದ ನಾಯಕನೊಬ್ಬನ ಮುಂದಾಳುತನದಲ್ಲಿರುವ ಎಲ್ಲಾ ಪಕ್ಷಗಳಿಗೂ ಸೇರಿದ ಅತ್ಯುತ್ತಮ ಸದಸ್ಯರನ್ನು ಹೊಂದಿರುವ ರಾಷ್ಟ್ರೀಯ ಸರ್ಕಾರವೊಂದು ನಮ್ಮ ನಾಡಿನ ಏಳಿಗೆಗಾಗಿ ಬರಲೆಂದು ಕನಸು ಕಾಣುತ್ತೇನೆ. ಶ್ರೀಮತಿ ಸೋನಿಯಾಜಿಯವರು ನಮ್ಮ ಮಠಕ್ಕೆ ಭೇಟಿ ನೀಡಲು ಅವಕಾಶ ಮಾಡಿಕೊಂಡು ಆಗಮಿಸಿರುವುದಕ್ಕೆ ನಮಗೆಲ್ಲ ತುಂಬಾ ಸಂತೋಷವುಂಟಾಗಿದೆ. ಸರ್ವಶಕ್ತನು ಅವರಿಗೆ ಉತ್ತಮ ಆರೋಗ್ಯ ಮತ್ತು ಸುಖ ಸಂತೋಷಗಳನ್ನು ಕರುಣಿಸಲೆಂದು ಬಯಸುತ್ತೇವೆ.

(ಪರಮಪೂಜ್ಯ ಶ್ರೀಗಳವರು ಉದ್ಘಾಟನಾ ಸಮಾರಂಭದಲ್ಲಿ ದಯಪಾಲಿಸಿದ ಶಿವನುಡಿ - ಕನ್ನಡ ಅನುವಾದ)

❑



# Dr. Shivakumara Swamiji continue to inspire lakhs & lakhs of people

**– Smt. Sonia Gandhi**

ಎಲ್ಲರಿಗೂ ನಮಸ್ಕಾರ,

His holiness Dr. Shivakumar Swamiji, His holiness Bala Gangadharanath Swamiji, Shri Shri Sutturu Deshikendra Swamiji, His holiness Shri Shri Siddalinga Swamiji & other Swamijis who are present, my party colleague, devotees, students, distinguish guests ಶರಣು ಶರಣಾರ್ಥಿ

I' m honored to be here in the hallowed premises of the Siddaganga math, as we celebrate 80 years of dedicated service of Dr. Shivakumara Swamiji to the cause of humanity. It is the privilege to congratulate Swamiji on completing 104 years on having witnessed 104 springs of nature of life in his very huge and colours. May Dr. Shivakumara Swamiji continue to inspire lakhs & lakhs of people across the state & across a country and indeed across the world in the cause of education, social service, philanthropy & spirituality. Sri Siddaganga Matha with its recorded history of six hundred years is truly unique. His achievements in the field of education are outstanding. Thousands of boys and girls of poor families are given food, shelter. Its colleges & institutions of high learning have acquired a national reputation. Over the fast centuries Karnataka has given birth to many social reformers who have conform very fabric of our society. For most amongst them is Sri Basaveshwara who advocated our casteless society, who championed the cause of equality and who fought tirelessly for social justice almost 900 years ago. His teachings have had a profound impact on millions including the Siddaganga Matha & continue to reservate & to be relevant even today. Education is no doubt about academic learnings. It is no doubt about acquiring qualifications to ultimately find security and fulfillment in life. But surely there has to be something deeper, something more basic to education, if it is to serve, as an effective instrument of nation building. And that something is values, moral values. Education must inculcate respect for the wonderful diversity of our society. It is this diversity that is given us, that is India's strength. They need to believe these diversity lies continuity & unity of our great nation. An open participative, representative democracy is its outer and nothing exemplified India's diversities better than Karnataka itself, where people of different cultures, believing in different faiths and speaking different languages have lived & worked for peace, for harmony each other to the ages. Education must is still in our use it is prescribed for secular heritage and tradition. So that we can spend up to the forces that seek to divide us whatever form they may take. Education must lead to deep sensitivity to the social justice. Education that has lead to the empowerment of weaker sections of society that is so very apparent in many parts of our country especially Karnataka. Nevertheless





the sad reality is & remains that are still so many of our countrymen & women who face discrimination who live in poverty & deprivation & now primary education has been made a fundamental right, it is for all of us to ensure that this right is asserted and imposed, so that all of our children, all of India's children from six to 14 receive free education. That education must also develop what Nehru used to often speak about a scientific temper. What is scientific temper? It is a spirit of ceaseless questioning or relentless enquiry. Indeed we had ancient centers of learning, individual thinker & philosophers in our country whose work led to path breaking discoveries. We also have great cultural, spiritual & intellectual traditions based on the wisdom, learning & experience gain over the millennia. So true education respect for these traditions, with a progressive contemporary outlook that needs challenges of our times . Swamijis life mission is an embodiment of these principles. The institutions he has inspired and created seek not only to provide the young people with the conventional education but places equal emphasis on character building and moral values. The students who emerge from these institutions are well suited to meeting the challenges of adult life to contributing in nation building & better society. Dr. Shivakumara swamiji exemplifies hard work & self discipline. That he pursue his mission even at this age is a remarkable lesson in itself. For swamiji, I believe his motto is work is worship and each one of us would do well to embide spirit to & make it part of our own life. Over the centuries, we in India have had the special blessings of been shown the right path by sages, reformers & teachers of different pace & persuasions. We have the privilege to work the past that they have illuminated for us. Like them Swamiji has shown us the path of selfless service of righteousness and universal brotherhood. So let us continue to be right guidance & inspiration from swamijis life, his speeching and his work.

Let me conclude, by once again congratulating the Sri Sri Shivakumara Swamiji on this auspicious occasion & offer him my respectful PRANAMAS. My PRANAMAS also to all the Swamijis present here who following in the footsteps of Swamiji have dedicated themselves to the service of humanity. And also to the devotees I extend my very best wishes, Thank you all... NAMASKARA

❑

## ಶ್ರೀವಾಣಿ

ಮಾತು ಮನವನ್ನು ಅರಳಿಸುವ ತಂಗಾಳಿಯೂ ಹೌದು, ಕೊಲ್ಲುವ ಕುಡುಗೋಲು ಕೂಡ. ಮಾತು ತಪಸ್ಸು. ಮಾತು ಜಪ. 'ಮೃದುವಚನವೇ ತಪ, ಮೃದು ವಚನವೇ ಜಪ! ಅಷ್ಟೇ ಅಲ್ಲ; ಮಾತು ಮುತ್ತೂ ಹೌದು, ಮಾಣಿಕ್ಯದ ದೀಪ್ತಿಯೂ ನಿಜ. ಮೃದು ಮಾತಿನ ಹಿಂದೆ 'ಸದುವಿನಯ'ವಿರುತ್ತದೆ. 'ಅಯ್ಯಾ' ಎಂಬುದೇ ಸ್ವರ್ಗ, 'ಎಲವೋ' ಎಂಬುದೆ ನರಕ. ಮಾತು ಮಾನವೀಯತೆಯ ಮಾಂಗಲ್ಯ, ಮನೆಯ ಬಾಗಿಲಿಗೆ ಕಟ್ಟುವ ಹಸಿರು ತೋರಣ, ಒಳಗೆ ಬೆಳಗುವ ಜ್ಯೋತಿ, 'ಏನು ಬಂದಿರಿ, ಹದುಳವಿದ್ದಿರೆ' ಎಂದು ಪ್ರೀತಿಯನ್ನು ತೋರಿಸಲಿರುವ ನುಡಿ ನೈವೇದ್ಯ. ಮಾತನ್ನು 'ಕೆರೆ, ಹಳ್ಳ, ಬಾವಿಗಳೆಂದಿದ್ದಾರೆ, ವಾರಿಧಿ ಎಂದಿದ್ದಾರೆ, ಕೊನೆಗೆ 'ಲಿಂಗ'ವೆಂದು ಭಕ್ತಿಯನ್ನು ವ್ಯಕ್ತಪಡಿಸಿದ್ದಾರೆ. ಮಾತು ಮನಕ್ಕೆ ತೆರೆದ ಕನ್ನಡಿ.

# ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಲಕ್ಷಾಂತರ ಜನರಿಗೆ ಪ್ರೇರಕ ಶಕ್ತಿಯಾಗಿದ್ದಾರೆ

**- ಶ್ರೀಮತಿ ಸೋನಿಯಾ ಗಾಂಧಿ**
ಯು.ಪಿ.ಎ. ಮತ್ತು ಅಖಿಲ ಭಾರತ ಕಾಂಗ್ರೆಸ್ ಅಧ್ಯಕ್ಷೆ, ನವದೆಹಲಿ

**ಮಾ**ನವಕುಲಕ್ಕಾಗಿ ತಮ್ಮ ಸೇವೆಯನ್ನು ಮುಡಿಪಾಗಿಟ್ಟಿರುವ ಶ್ರೀ ಶ್ರೀ ಶಿವಕುಮಾರಸ್ವಾಮೀಜಿಯವರ ೮೦ ವರ್ಷಗಳ ಸೇವೆಯ ಅವಧಿಯನ್ನು ಆಚರಿಸಲು ನಾವಿಂದು ಇಲ್ಲಿ ನೆರೆದಿರುವ ಸಂದರ್ಭದಲ್ಲಿ ಸಿದ್ಧಗಂಗಾಮಠದ ಪವಿತ್ರ ಸ್ಥಳದಲ್ಲಿ ಬಂದದ್ದು ನನಗೆ ಅತ್ಯಂತ ಸಂತೋಷವನ್ನುಂಟುಮಾಡಿದೆ.

೧೦೪ ವರ್ಷಗಳನ್ನು ಪೂರೈಸಿ, ಪ್ರಕೃತಿಯ ೧೦೫ ವಸಂತಗಳನ್ನು ಕಂಡು ಅವುಗಳ ವೈವಿಧ್ಯಮಯ ಬಗೆಬಗೆಯ ಅನುಭವಗಳನ್ನು ಪಡೆದಿರುವ ಪರಮಪೂಜ್ಯ ಸ್ವಾಮೀಜಿಯವರಿಗೆ ಧನ್ಯವಾದವನ್ನು ಅರ್ಪಿಸುವುದು ಒಂದು ಸದವಕಾಶವಾಗಿದೆ. ಈ ರಾಜ್ಯದ ಉದ್ದಗಲಕ್ಕೆ ನಾಡಿನೆಲ್ಲೆಡೆ ಅಷ್ಟೇ ಅಲ್ಲದೆ ಪ್ರಪಂಚದಾದ್ಯಂತ, ಶೈಕ್ಷಣಿಕ ಉದ್ದೇಶಕ್ಕಾಗಿ ಸಮಾಜ ಸೇವೆಯಲ್ಲಿ, ಮಾನವರ ಶ್ರೇಯಸ್ಸಿಗಾಗಿ ಮತ್ತು ಆಧ್ಯಾತ್ಮಿಕ ಏಳಿಗೆಗಾಗಿ, ಸ್ವಾಮಿಜಿಯವರು ಲಕ್ಷ ಲಕ್ಷಾಂತರ ಜನರಲ್ಲಿ ಉತ್ಸಾಹವನ್ನು ಇದೇ ರೀತಿ ತುಂಬಿ ಪ್ರೋತ್ಸಾಹಿಸುತ್ತಿರಲಿ.

೬೦೦ ವರ್ಷಗಳಿಗೂ ಮಿಗಿಲಾದ ಐತಿಹಾಸಿಕ ದಾಖಲಾತಿಯನ್ನು ಪಡೆದಿರುವ ಶ್ರೀ ಸಿದ್ಧಗಂಗಾ ಮಠವು ನಿಜವಾಗಿಯೂ ಅದ್ವಿತೀಯವಾದದ್ದು. ಶೈಕ್ಷಣಿಕ ರಂಗದಲ್ಲಿನ ಅವರ ಸಾಧನೆ ಅದ್ವಿತೀಯವಾದದ್ದು. ಬಡ ಕುಟುಂಬಗಳಿಂದ ಬಂದ ಸಾವಿರಾರು ವಿದ್ಯಾರ್ಥಿ ಹಾಗೂ ವಿದ್ಯಾರ್ಥಿನಿಯರು ಉಚಿತ ಆಹಾರ, ವಸತಿ ಹಾಗೂ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ಅದಕ್ಕೆ ಸೇರಿದ ಕಾಲೇಜುಗಳು ಮತ್ತು ಉನ್ನತ ಶಿಕ್ಷಣ ಸಂಸ್ಥೆಗಳು ರಾಷ್ಟ್ರೀಯವಾಗಿ ಮನ್ನಣೆ ಪಡೆದಿವೆ.

ಕಳೆದ ಶತಮಾನಗಳಲ್ಲಿ ಕರ್ನಾಟಕವು, ನಮ್ಮ ಸಮಾಜದಲ್ಲಿ ಮೂಲಭೂತ ಬದಲಾವಣೆಯನ್ನು ತಂದಂತಹ ಅನೇಕ ಸಮಾಜ ಸುಧಾರಕರಿಗೆ ಜನ್ಮ ನೀಡಿದೆ. ಅವರಲ್ಲಿ ಪ್ರಮುಖರಾದವರೆಂದರೆ ಜಾತಿ ರಹಿತ ಸಮಾಜದ ನಿರ್ಮಾಣ ಪ್ರತಿಪಾದಿಸಿದ, ಸರ್ವರ ಸಮಾನತೆಯನ್ನು ಬೆಂಬಲಿಸಿದ ಹಾಗೂ ಸಮಾನ ಅವಕಾಶವು ಅವರೆಲ್ಲರಿಗೆ ದೊರೆಯಲೆಂದು ಬಯಸಿದ ಮತ್ತು ಸಾಮಾಜಿಕ ನ್ಯಾಯಕ್ಕಾಗಿ ಸುಮಾರು ಒಂಬೈನೂರು ವರ್ಷಗಳಷ್ಟು ಹಿಂದೆಯೇ ನಿರಂತರವಾಗಿ ಹೋರಾಡಿದ ಬಸವೇಶ್ವರರು. ಸಿದ್ಧಗಂಗಾ ಮಠವೂ ಸೇರಿದಂತೆ ಲಕ್ಷಾಂತರ ಮಂದಿಯ ಮೇಲೆ ಅವರ ಬೋಧನೆಗಳು ಆಳವಾಗಿ ಚಿಂತನೆಯನ್ನು ಮಾಡಲು ಬೇರೂರಿವೆ ಮತ್ತು ಇಂದೂ ಸಹ ಕಂಪವನ್ನುಂಟುಮಾಡುತ್ತಿವೆ.

ಶಿಕ್ಷಣವೆಂದರೆ ಶಾಲೆಗಳಲ್ಲಿ ದೊರಕುವ ತಾರ್ಕಿಕ ಜ್ಞಾನವೆಂಬುದರಲ್ಲಿ ಸಂದೇಹವಿಲ್ಲ. ಅಂದರೆ ಅದು ಅಂತಿಮವಾಗಿ ಜೀವನದಲ್ಲಿ ಸುರಕ್ಷೆ ಮತ್ತು ತೃಪ್ತಿಯನ್ನು ಪಡೆಯುವುದಕ್ಕಾಗಿ, ಆದರೆ ರಾಷ್ಟ್ರವನ್ನು ಬಲಪಡಿಸುವ ಸಾಧನವಾಗಿ ಅದನ್ನು ಉಪಯೋಗಿಸ ಬೇಕಾದರೆ ನಿಜವಾಗಿಯೂ ಶಿಕ್ಷಣದಲ್ಲಿ ಒಂದು ಮೂಲ ಅಂಶ ಇರಲೇಬೇಕು. ಅದನ್ನೇ ಅಮೂಲ್ಯವಾದದ್ದು ಎಂದು ಪರಿಗಣಿಸುವುದು.

ಶಿಕ್ಷಣವು ನಮ್ಮ ಸಮಾಜದಲ್ಲಿನ ಅಚ್ಚರಿಪೂರ್ಣವಾದ ವೈವಿಧ್ಯತೆಗೆ ಒಂದು ಬೆಲೆಯನ್ನು ತರಬೇಕು. ಅದರಿಂದಲೇ ನಮಗೆ ಸಾಮರ್ಥ್ಯ ಬರುವುದು. ಈ ವೈವಿಧ್ಯತೆಯಿಂದಲೇ ನಮಗೆ ಶಕ್ತಿ. ಅದರ ಅಡಿಪಾಯುವೇ ನಮ್ಮ ಈ ದೊಡ್ಡ ದೇಶದ ಮುಂದುವರಿಯುವಿಕೆ ಮತ್ತು ಐಕ್ಯತೆ. ಅದನ್ನು ಬಲವಾಗಿ ಹಿಡಿದಿಡುವ ಲಂಗರು ಎಂದರೆ ಎಲ್ಲೆಡೆಯೂ ಗೋಚರಿಸುವ ತಾರ್ಕಿಕತೆಗೆ ಒಳಗಾಗಿರುವ ಪ್ರಜಾಪ್ರಭುತ್ವ ಪ್ರತಿನಿಧಿತ್ವ ಪದ್ಧತಿ. ಭಾರತದ ಬಹುಮುಖದ ಸ್ವರೂಪವನ್ನು ಕರ್ನಾಟಕದ ಹಾಗೆ ಬೇರೆ ಎಲ್ಲಿಯೂ ಕಾಣಲಾರೆವು. ಇಲ್ಲಿ ಕಾಲಾಂತರದಿಂದಲೂ ಬೇರೆ ಬೇರೆ ಸಂಸ್ಕೃತಿಯ ಜನ, ಬೇರೆ ಬೇರೆ ಧರ್ಮಾಭಿಮಾನಿಗಳು ಮತ್ತು ವಿವಿಧ ಭಾಷೆಗಳನ್ನಾಡುವವರು ಯುಗ ಯುಗಾಂತರದಿಂದಲೂ ಪರಸ್ಪರ ಶಾಂತಿ ಸೌಹಾರ್ದತೆಗಳಿಂದ ಕೂಡಿ ಬದುಕು ಸಾಗಿಸುತ್ತಿದ್ದಾರೆ. ಶಿಕ್ಷಣವು ನಮ್ಮ ಮತಸಹಿಷ್ಣುತೆಯ ನೀತಿ ಮತ್ತು ನಮಗೆ ಬಳುವಳಿಯಾಗಿ ಬಂದಿರುವ ಉದಾತ್ತತೆಗೆ ಹೊಂದಿಕೊಂಡು ಅದಕ್ಕೆ ಧಕ್ಕೆ ಬಾರದ ರೀತಿಯಲ್ಲಿ ನಡೆಯುವ ಮನೋಭಿಲಾಷೆಯನ್ನು ನಮ್ಮ ಯುವ ಯುವಜನಾಂಗದಲ್ಲಿ ತುಂಬಬೇಕು. ಅದರಿಂದ





ನಮ್ಮಲ್ಲಿ ಭೇದವನ್ನು ಹುಟ್ಟು ಹಾಕುವ ಶಕ್ತಿಗಳು ಯಾವರೀತಿಯಲ್ಲಿ ಬಂದರೂ ಅವುಗಳನ್ನು ಎದುರಿಸಿ ನಿಲ್ಲಬಲ್ಲೆವು.

ಸಾಮಾಜಿಕ ನ್ಯಾಯದ ಕಡೆ ಆಳವಾಗಿ ಚಿಂತಿಸುವಂತೆ ಶಿಕ್ಷಣವು ಎಲ್ಲರನ್ನೂ ಕೊಂಡೊಯ್ಯುವಂತಾಗಬೇಕು. ದೇಶದ ಅನೇಕ ಭಾಗಗಳಲ್ಲಿ ಸ್ಪಷ್ಟವಾಗಿ ಕಂಡು ಬರುತ್ತಿರುವಂತೆ, ಸಮಾಜದಲ್ಲಿ ದುರ್ಬಲವರ್ಗಗಳಿಗೆ ಶಕ್ತಿ ತುಂಬುವಂತೆ ಮಾಡಿರುವುದು ಶಿಕ್ಷಣ. ಅದರಲ್ಲಿಯೂ ಕರ್ನಾಟಕದಲ್ಲಿ ಇದು ವೇದ್ಯ. ಆದರೂ ಸಹ ನಮ್ಮ ದೇಶದ ಪ್ರಜೆಗಳಲ್ಲಿ ಈಗಲೂ ಸಹ ನಮ್ಮ ಎಷ್ಟೋ ಸ್ತ್ರೀ ಪುರುಷರು ವರ್ಗಭೇದ, ಬಡತನ ಮತ್ತು ಅವಶ್ಯಕತೆಗಳಿಂದ ತೊಂದರೆ ಪಡುತ್ತಿರುವ ರೆಂಬುದೇ ದುಃಖಕರವಾದ ಸತ್ಯಾಂಶ. ಈಗ ಪ್ರಾಥಮಿಕ ಶಿಕ್ಷಣವನ್ನು ಮೂಲಭೂತ ಹಕ್ಕುಗಳಲ್ಲಿ ಒಂದೆಂದು ಪರಿಗಣಿಸಿರು ವಾಗ ಈ ಹಕ್ಕನ್ನು ಸರಿಯಾಗಿ ಚಲಾಯಿಸುವಂತೆಯೂ ಮತ್ತು ಕಡ್ಡಾಯಗೊಳಿಸುವಂತೆಯೂ ಮಾಡುವುದು ನಮ್ಮೆಲ್ಲರಿಗೂ ಸೇರಿದೆ.

ಜವಹರ್‌ಲಾಲ್ ನೆಹರೂರವರು ಆಗಾಗ್ಗೆ ಹೇಳುತ್ತಿದ್ದ ಹಾಗೆ ಶಿಕ್ಷಣವೆನ್ನುವುದು ಅಭಿವೃದ್ಧಿಹೊಂದಬೇಕಾಗಿದೆ. ಅಂದರೆ ವೈಜ್ಞಾನಿಕ ದೃಷ್ಟಿಕೋನ. ಇದು ಬಿಡುವಿಲ್ಲದಂತೆ ಪ್ರಶ್ನೆಗಳನ್ನು ಹಾಕುವುದು ಮತ್ತು ನಿರಂತರ ಅನ್ವೇಷಣೆ ಮಾಡುವುದು. ನಮ್ಮಲ್ಲಿ ಜ್ಞಾನವನ್ನು ಗಳಿಸಲು ಜ್ಞಾನ ದಾನಕೇಂದ್ರಗಳಿದ್ದವು, ಪ್ರತ್ಯೇಕ ಜ್ಞಾನಿಗಳಿದ್ದರು, ತತ್ತ್ವ ಸಿದ್ಧಾಂತಿ ಗಳಿದ್ದರು. ಅವರೆಲ್ಲರ ಕಾಯಕ ನೂತನ ಆವಿಷ್ಕಾರಗಳಿಗೆ ಕಾರಣವಾಯಿತು. ವಿವೇಕ, ಜ್ಞಾನ, ಬುದ್ಧಿವಂತಿಕೆ, ಸಾವಿರಾರು ವರ್ಷಗಳಿಂದ ಗಳಿಸಿದ ಅನುಭವ ಇವುಗಳೆಲ್ಲದರ ಮೇಲೆ ಭದ್ರವಾಗಿ ತಳ ಊರಿರುವ ಸಾಂಸ್ಕೃತಿಕ, ಆಧ್ಯಾತ್ಮಿಕ ಮತ್ತು ಬೌದ್ಧಿಕ ಬೆಲೆಗಟ್ಟಿನ ಪರಂಪರೆಯನ್ನು ಸಹ ನಾವು ಹೊಂದಿದ್ದೇವೆ. ನಿಜವಾದ ಶಿಕ್ಷಣವೆಂದರೆ ನಮ್ಮ ಕಾಲದ ಸಮಸ್ಯೆಗಳನ್ನು ಎದುರಿಸಬಲ್ಲ ದೃಢತೆಯಿಂದ ಪರಂಪರೆಯೊಂದಿಗೆ ಸಮಕಾಲೀನ ದೃಷ್ಟಿಕೋನವೂ ಸೇರಿ ನಮ್ಮ ಈಗಿನ ಸಮಸ್ಯೆಗಳನ್ನು ನಿಭಾಯಿಸುವುದು.

ಸ್ವಾಮೀಜಿಯವರ ಜೀವನದ ಗುರಿ ಇಂತಹ ಕಾರ್ಯದ ಮೂರ್ತರೂಪವೇ ಆಗಿದೆ. ಅವರು ಸ್ಫೂರ್ತಿ ನೀಡುತ್ತಿರುವ ಮತ್ತು ಸ್ಥಾಪಿಸಿರುವ ಹಾಗೂ ಸ್ಥಾಪಿಸಬೇಕೆಂದಿರುವ ಸಂಸ್ಥೆಗಳು ಯುವಜನತೆಗೆ ಕೇವಲ ಸಾಂಪ್ರದಾಯಿಕ ಶಿಕ್ಷಣವನ್ನು ಕೊಡುವ ಉದ್ದೇಶವನ್ನು ಮಾತ್ರ ಹೊಂದಿಲ್ಲ ಆದರೆ ಅವರಲ್ಲಿ ಚಾರಿತ್ರ್ಯವೃದ್ಧಿ ಮತ್ತು ನೈತಿಕ ಮೌಲ್ಯವನ್ನು ತುಂಬುವ ಗುರಿಯನ್ನು ಹೊಂದಿವೆ. ಈ ಸಂಸ್ಥೆಗಳಿಂದ ಹೊರಗೆ ಬರುವ ವಿದ್ಯಾರ್ಥಿಗಳು ಪ್ರಬುದ್ಧ ವಯಸ್ಸಿನ ಸಮಸ್ಯೆ ಗಳನ್ನು ಆಹ್ವಾನಿಸಿ ಎದುರಿಸಲು ಸಿದ್ಧರಾಗಿರು ವುದಲ್ಲದೆ ರಾಷ್ಟ್ರದ ಅಭಿವೃದ್ಧಿ ಮತ್ತು ಉತ್ತಮ ಸಮಾಜ ನಿರ್ಮಾಣ ಕಾರ್ಯಕ್ಕೆ ಉತ್ತಮವಾಗಿ ಸಿದ್ಧರಿರುವರೆಂಬುದರಲ್ಲಿ ನನಗೆ ಸ್ವಲ್ಪವೂ ಸಂದೇಹವಿಲ್ಲ.

ಸ್ವಾಮೀಜಿಯವರು ಶ್ರಮ ಮತ್ತು ಶಿಸ್ತಿನ ದುಡಿಮೆಗೆ ಮಾದರಿಯಾಗಿದ್ದಾರೆ. ಈ ವಯಸ್ಸಿನಲ್ಲಿಯೂ ಸಹ ತಮ್ಮ ಧಾರ್ಮಿಕ ಕಾರ್ಯಗಳಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿರುವುದು ಒಂದು ಅಮೋಘವಾದ ಉದಾಹರಣೆಯಾಗಿದೆ. ಸ್ವಾಮೀಜಿ ಯವರಿಗೆ **'ಕಾಯಕವೇ ಕೈಲಾಸ'** ಇಂತಹ ಚೈತನ್ಯದಾಯಕ ಭಾವವನ್ನು ನಮ್ಮಲ್ಲಿ ಪ್ರತಿಯೊಬ್ಬರೂ ಅಳವಡಿಸಿ ಕೊಂಡರೆ ಮತ್ತು ನಮ್ಮದೇ ಜೀವನದ ಭಾಗವನ್ನಾಗಿಸಿಕೊಂಡರೆ ಮತ್ತು ನಮ್ಮದೇ ಜೀವನದ ಭಾಗವನ್ನಾಗಿಸಿಕೊಂಡತೆ ಅದು ತುಂಬಾ ಶ್ರೇಯಸ್ಕರ ವಾದದ್ದು.

ಶತಮಾನಗಳಿಂದ ನಾವು ಭಾರತದಲ್ಲಿ ಋಷಿವರ್ಯರು ಗಳಿಂದ, ಸುಧಾರಕರು ಮತ್ತು ವಿವಿಧ ಧರ್ಮಗಳ ಬೋಧಕರು ಮತ್ತು ಪ್ರೇರಕರುಗಳಿಂದ ಅಧಿಕೃತವಾಗಿ ಸರಿಯಾದ ಮಾರ್ಗದರ್ಶನ ವನ್ನು ಪಡೆದು ಅನುಗ್ರಹಿತರಾಗಿದ್ದೇವೆ. ನಮಗಾಗಿ ಅವರೆಲ್ಲರೂ ಕೃಪೆದೋರಿ ಬೆಳಕು ತೋರಿಸಿರುವ ಮಾರ್ಗದಲ್ಲಿ ಸಾಗಲು ಪುಣ್ಯವಂತರಾಗಿದ್ದೇವೆ. ಸ್ವಾಮೀಜಿಯವರು ನಮಗೆ ನಿಸ್ವಾರ್ಥ ಸೇವೆಗೈಯುವ, ಯುಕ್ತವಾದ ಮಾರ್ಗದಲ್ಲಿ ಸಾಗುವ ಮತ್ತು ವಿಶ್ವಭ್ರಾತೃತ್ವದ ಹಾದಿಯನ್ನು ತೋರಿಸಿದ್ದಾರೆ.

ಮಿತ್ರರೇ, ಅವರ ಜೀವನ, ಬೋಧನೆ ಮತ್ತು ಕೃತಿಗಳಿಂದ ನಾವು ಮಾರ್ಗದರ್ಶನ ಮತ್ತು ಪ್ರೇರಣೆಗಳನ್ನು ನಿರಂತರ ಪಡೆಯುತ್ತಿರೋಣ.

ಶರಣು ಶರಣಾರ್ಥಿ.

(ಶ್ರೀಮತಿ ಸೋನಿಯಾ ಗಾಂಧಿಯವರು ಮಾಡಿದ ಉದ್ಘಾಟನಾ ಭಾಷಣದ ಕನ್ನಡ ಅನುವಾದ ಪ್ರೊ. ಟಿ.ಎಸ್. ರಾಮಚಂದ್ರರಾವ್)

❑

**ಶ್ರೀವಾಣಿ**

ವಿಶ್ರಾಂತಿ ಎಂದರೆ ಗಂಟೆಗಟ್ಟಲೆ ಹಾಸಿಗೆಯ ಮೇಲೆ ಮಲಗಿರುವುದಲ್ಲ. ಹರಟೆಯಲ್ಲಿ ದಿನವೆಲ್ಲಾ ನಿರತವಾಗಿರುವುದಲ್ಲ. ಒಂದು ಕೆಲಸದಲ್ಲಿ ಬೇಸರವಾದರೆ, ಮತ್ತೊಂದರಲ್ಲಿ ತೊಡಗುವುದು.



# ವಿದ್ಯಾರ್ಥಿಗಳಲ್ಲಿ ಭಗವತ್ ಸ್ವರೂಪವನ್ನು ಕಂಡ ಪೂಜ್ಯ ಶ್ರೀಗಳು

- ಪೂಜ್ಯ ಶ್ರೀ ಶ್ರೀ ಜಪಾನಂದ ಮಹಾಸ್ವಾಮಿಗಳು
ರಾಮಕೃಷ್ಣಾಶ್ರಮ, ಪಾವಗಡ

ಇಂದು ಇಡೀ ಶತಮಾನದಲ್ಲಿಯೇ ಅತ್ಯಂತ ಪವಿತ್ರ ಹಾಗೂ ಸಂತೋಷಕರವಾದ ಕಾರ್ಯಕ್ರಮದಲ್ಲಿ ನಾವು ಭಾಗಿಯಾಗಿದ್ದೇವೆ. ಈ ಕಾರ್ಯಕ್ರಮವು ಅಂತಿಂಥದ್ದಲ್ಲ. ಒಬ್ಬ ಮಹಾನ್ ಯೋಗಿ ಕರ್ಮ ಕ್ಷೇತ್ರದಲ್ಲಿ ತನ್ನ ಸ್ವಧರ್ಮವಾದ ಜೀವನಲ್ಲಿ ಶಿವನನ್ನು ಕಂಡು ಸೇವೆ ಸಲ್ಲಿಸುತ್ತಿರುವಂತಹ ಮಹಾನ್ ಕಾಯಕ ಯೋಗಿ ಶ್ರೀ ಸಿದ್ಧಗಂಗಾ ಮಠದ, ಕರ್ನಾಟಕ ರತ್ನ, ತ್ರಿವಿಧ ದಾಸೋಹ ಜ್ಯೋತಿ ಪರಮಪೂಜ್ಯ ಶ್ರೀ ಮ.ನಿ.ಪ್ರ.ಸ್ವ ಡಾ॥ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೦೫ನೇ ಜನ್ಮದಿನೋತ್ಸವದ ಮಹೋತ್ಸವವನ್ನು ಆಚರಿಸುತ್ತಿದ್ದೇವೆ. ಈ ನಡೆದಾಡುವ ಶಿವನ ಬಗ್ಗೆ ನಾವೇನು ಮಾತನಾಡುವಂತಿಲ್ಲ. ಅವರ ಕಾಯಕವೇ ಹಾಗೂ ಅವರ ಧರ್ಮವೇ ಅವರ ಜೀವನಕ್ಕೆ ಸಾಕ್ಷಿಯಾಗಿದೆಯೆಂದು ನನ್ನ ನಂಬಿಕೆ. ಈ ದಿವ್ಯವಾದ, ಪವಿತ್ರವಾದ ಕಾರ್ಯಕ್ರಮದಲ್ಲಿ ಯಾರ್‍ಯಾರು ಭಾಗವಹಿಸುತ್ತಿರುವರೋ ಅವರೆಲ್ಲರಿಗೂ ಮತ್ತೆ ಮರು ಜನ್ಮವಿಲ್ಲವೆಂದೇ ನನ್ನ ಭಾವನೆ.

ಸ್ವಧರ್ಮದಲ್ಲಿ ಶ್ರದ್ಧೆ ಇತರ ಧರ್ಮದ ಬಗ್ಗೆ ಗೌರವ ಈ ವಿಚಾರವನ್ನು ಹುಟ್ಟು ಹಾಕಿ ಅದರ ಬಗ್ಗೆ ಸವಿಸ್ತಾರವಾಗಿ ಅನೇಕ ಮಹಿಮರು ಇಂದು ತಮ್ಮ ವ್ಯಾಖ್ಯಾನವನ್ನು ನೀಡಿರುತ್ತಾರೆ. ನಾವು ಮತ್ತೆ ವ್ಯಾಖ್ಯಾನವನ್ನು ನೀಡುವ ಬದಲಾಗಿ ಈ ಸಿದ್ಧಗಂಗೆಯ ಸಿದ್ಧ ಪುರುಷನ ಜೀವನವನ್ನು ಒಂದು ಬಾರಿ ಅವಲೋಕಿಸಿದರೆ ನಮಗೆ ಈ ಮೇಲಿನ ವಿಚಾರದ ಸಂಪೂರ್ಣ ಮಾಹಿತಿ ದೊರೆಯುವುದರಲ್ಲಿ ಸಂದೇಹವಿಲ್ಲ. ಸಹಸ್ರಾರು ವಿದ್ಯಾರ್ಥಿಗಳಿಗೆ ಅವರ ಜಾತಿ, ಮತ ಭೇದ ಭಾವನೆಯ ಯಾವುದೇ ಸೋಂಕಿಲ್ಲದೆ ಎಲ್ಲರೂ ಭಗವತ್ ಸ್ವರೂಪಿಗಳು ಎನ್ನುವ ಭಾವನೆಯಿಂದ ಸಹಸ್ರಾರು ವಿದ್ಯಾರ್ಥಿಗಳಿಗೆ ಏಕಪ್ರಕಾರವಾಗಿ ಜ್ಞಾನ ಯಜ್ಞ ಹಾಗೂ ಅನ್ನದಾನದ ಯಜ್ಞಗಳನ್ನು ನೆರವೇರಿಸಿಕೊಂಡು ಶತಮಾನವನ್ನು ದಾಟಿರುವಂತಹ ಶತಾಯುಷಿ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರೇ ನಮ್ಮ ಪ್ರಪಂಚಕ್ಕೆ ಮಹಾನ್ ಆದರ್ಶ ಎಂದು ಭಾವಿಸಬಹುದು. ಎಲ್ಲ ಧರ್ಮಗಳ, ಎಲ್ಲ ಮತಗಳ, ಎಲ್ಲ ಜಾತಿಯ ವಿದ್ಯಾರ್ಥಿಗಳು ಒಂದೇ ಸೂರಿನಲ್ಲಿ ವಿದ್ಯಾಭ್ಯಾಸ ಮತ್ತು ಜೀವನವನ್ನು ರೂಪಿಸಿಕೊಳ್ಳುವಂತಹ ಪವಿತ್ರ ದಾಸೋಹ ನಿಲಯ ಸಿದ್ಧಗಂಗಾ ಕ್ಷೇತ್ರವಾಗಿದೆ.

ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರ ೧೦೫ನೇ ಜನ್ಮದಿನೋತ್ಸವ ಕೇವಲ ತುಮಕೂರಿಗೆ ಅಥವಾ ಕರ್ನಾಟಕಕ್ಕೆ ಅಥವಾ ಇಡೀ ದೇಶಕ್ಕೆ ಸೀಮಿತವಾಗಿರದೆ ಪೂರ್ಣ ವಿಶ್ವಕ್ಕೆ ಈ ಮಹಾನ್ ಯೋಗಿಯ ಜೀವನ ಚರಿತ್ರೆ ಮುಟ್ಟುವಂತಾಗಬೇಕು ಮತ್ತು ಉತ್ಸವ ಎಲ್ಲೆಡೆಯೂ ಹರಡುವಂತಾಗಬೇಕು. ಮುಖ್ಯವಾಗಿ ದೇಶದ ಮುಂದಿನ ಪೀಳಿಗೆ ದೇಶವನ್ನು ಮುನ್ನಡೆಸುವ ಯುವ ಜನತೆ ಈ ಮಹಾನ್ ಅನುಷ್ಠಾನ ವೇದಾಂತ ಮೂರ್ತಿಯನ್ನು ತಮ್ಮ ಜೀವನದ ಸ್ಫೂರ್ತಿಯನ್ನಾಗಿಸಿಕೊಂಡು ಮುಂದುವರಿಯಬೇಕು. ಭಾರತದ ಸನಾತನ ಧರ್ಮದ ಹಾಗೂ ಪರಂಪರೆಯ ಮತ್ತೆಲ್ಲದಕ್ಕಿಂತ ಮಿಗಿಲಾಗಿ ಅಣ್ಣ ಬಸವಣ್ಣನ ಕಾಯಕವೇ ಕೈಲಾಸ ಎಂಬ ಉಪನಿಷತ್ತು ವಾಣಿಯ ಸಾಕಾರ ಮೂರ್ತಿ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳಾಗಿರುತ್ತಾರೆ. ಈ ಮಹಾನ್ ಚೇತನ ನಮ್ಮೆಲ್ಲರೊಂದಿಗಿರುವುದು ಹಾಗೂ ಈ ದೇಶ ಈ ಮಹಾತ್ಮನನ್ನು ಪಡೆದಿರುವುದು ಅದೆಂತಹ ಪವಿತ್ರ ದೇಶವಾಗಿರಬೇಡ ! ಈ ಸಂದರ್ಭದಲ್ಲಿ ನಮ್ಮ ಯುವಜನತೆಯು ಜೀವನದ ಲಲಾಸೆಗಳು ಹಾಗೂ ಸುಖಭೋಗಗಳ ಸುಳಿಯಲ್ಲಿ ಸಿಲುಕದೆ ತ್ಯಾಗ ಮತ್ತು ಸೇವೆಯ ಸಾಕಾರಮೂರ್ತಿಯಾದ ಶ್ರೀ ಸಿದ್ಧಗಂಗಾ ಸ್ವಾಮೀಜಿಯವರ ಜೀವನ ಚರಿತ್ರೆಯನ್ನು ಒಂದು ಬಾರಿ ಅವಲೋಕಿಸಿದರೆ ಸಾಕು ಆ ವ್ಯಕ್ತಿಗಳ ಆಂತರ್ಯದಲ್ಲಿ ಚೇತನಾ ಶಕ್ತಿ ಸ್ಫುರಣ ವಾಗುವುದರಲ್ಲಿ ಸಂದೇಹವಿಲ್ಲ. ಯುವಜನತೆಗೆ ಶ್ರೀ ಶ್ರೀಗಳವರ ಆದರ್ಶ ಮತ್ತು ನುಡಿ ತಮ್ಮ ಜೀವನವನ್ನು ರೂಪಿಸಿಕೊಳ್ಳುವ ಮಾರ್ಗದರ್ಶನದ ಹಾದಿ ಎಂದು ಭಾವಿಸೋಣ.

ಈ ಸಂದರ್ಭದಲ್ಲಿ ನನ್ನ ಕಳಕಳಿಯ ಪ್ರಾರ್ಥನೆಯೆಂದರೆ ಮುಂದಿನ ಭವಿಷ್ಯ ಭಾರತವನ್ನು ಮುನ್ನಡೆಸುವ ಯುವ ಪೀಳಿಗೆಗೆ ಆದರ್ಶ ಪ್ರಾಯವಾಗಿರುವಂತಹ ಈ ಮಹಾನ್ ಚೇತನ ಮತ್ತೂ ಅನೇಕ ಸಂವತ್ಸರಗಳ ಸಾರ್ಥಕ ಬಾಳಿನ ಪುಟಗಳನ್ನು ಬರೆಯುತ್ತಾ ಮುಂದೆ ಸಾಗಲಿ, ಈ ಮಹಾನ್ ಚೇತನ ಕೇವಲ ಒಂದು ಧರ್ಮಕ್ಕೆ, ಜಾತಿಗೆ, ಪಂಗಡಕ್ಕೆ ಸೀಮಿತವಾಗದೆ ಇಡೀ ಮನುಕುಲಕ್ಕೆ ವಿಶ್ವ ಮಾನವ ಸಂದೇಶವನ್ನು ನೀಡುತ್ತಿರುವ ಚೇತನವಾಗಿ ಭವಿಷ್ಯ ಭಾರತದ ಮುನ್ನುಡಿಯನ್ನು ಬರೆಯಲು ಕಾರಣೀಭೂತರಾಗಿ ಶ್ರೀ ಸಿದ್ಧಗಂಗಾ ಶ್ರೀಗಳು ಮನುಕುಲಕ್ಕೆ ಆಶೀರ್ವದಿಸಲಿ ಹಾಗೂ ಯುವ ಜನಾಂಗಕ್ಕೆ ಚೈತನ್ಯ ತುಂಬಲಿ, ಮತ್ತೆಲ್ಲದಕ್ಕಿಂತ ಮಿಗಿಲಾಗಿ ಸ್ವಧರ್ಮ ಹಾಗೂ ಸಹನೆ ಎಂಬ ಎರಡು ಮೇರು ದಂಡ ನಮ್ಮ ಜೀವನದ ಮಾರ್ಗಸೂಚಿಯಾಗಲಿ ಎಂದು ನನ್ನ ಹೃದಯಾಂತರಾಳದ ಪ್ರಾರ್ಥನೆ. □







# ಮನೆ ಮನೆಯೂ ಗ್ರಂಥಾಲಯವಾಗಬೇಕು

- ಶ್ರೀ ಶ್ರೀ ಪಂಚಮಶಿವಲಿಂಗೇಶ್ವರ ಮಹಾಸ್ವಾಮಿಗಳು
ಶ್ರೀ ಜಗದ್ಗುರು ದುರದುಂಡೀಶ್ವರ ಸಂಸ್ಥಾನಮಠ, ನಿಡಸೋಸಿ

*ಕಾಯದೊಳಗೆ ಗುರುಲಿಂಗ ಜಂಗಮವನಾಯಕವ ನುರಿಯಲಿಕೆ*
*ಸುಲಭೋಪಾಯದಿಂದಿರುಟ್ಟು ಆಯ ಸ್ಥಲಕೆ ಗುರುವಾಗಿ*
*ದಾಯದೋರಿ ಸಮಸ್ತ ಭಕ್ತರಿಗೆ ಕಾಯವನು*
*ಪಾವನವ ಮಾಡಿದ ರಾಯಪೂರ್ವಾಚಾರ್ಯ ಸಂಗನ ಬಸವ ಶರಣಾರ್ಥಿ*

ಪೂಜ್ಯರ ನೂರಾಐದನೇ ಶತಮಾನೋತ್ಸವದಂದು **'ಅನುಭಾವ ಪಥ'** ಎಂಬ ಪುಸ್ತಕ ಬಿಡುಗಡೆ ಹೊಂದಿರುವುದು ಬಹಳ ಸಂತೋಷದ ಸಂಗತಿಯಾಗಿದೆ. ಯಾಕೆಂದರೆ ಪುಸ್ತಕಗಳು ಯಾವತ್ತೂ ಮನುಷ್ಯನಲ್ಲಿ ಬದಲಾವಣೆಯನ್ನು ತರುವಂತಹ ಶಕ್ತಿಯನ್ನು ಕೊಡುತ್ತವೆ. ಗಾಂಧೀಜಿಯವರಲ್ಲಿ ಬದಲಾವಣೆಗಳನ್ನು ತಂದಂತಹ ಎರಡು ಪುಸ್ತಕಗಳು ಯಾವುದು ಎಂಬುದು ನಿಮಗೆ ತಿಳಿದಿದೆ. ಪುಸ್ತಕಗಳನ್ನು ನಾವು ಹೇಗೆ ನೋಡಬೇಕೆಂದರೆ ಅವುಗಳಲ್ಲಿ ನಮಗೆ ಏನು ಬೇಕಾಗಿದೆ ಎಂಬುದು. ಅವುಗಳಿಂದ ನಮ್ಮ ಜೀವನ ಎಷ್ಟು ಉದ್ಧಾರವಾಗಿದೆ ಮತ್ತು ಏನು ಆಗ್ತೀವಿ ಎಂದು ತಿಳಿದುಕೊಳ್ಳಲಿಕ್ಕೆ ಪುಸ್ತಕಗಳು ಬೇಕು. ಹಿಂದಿನದ್ದು, ಈಗಿನದ್ದು ಮತ್ತು ಮುಂದಿನದ್ದು ಹೇಳುವ ಗ್ರಂಥಗಳೇ ನಮ್ಮ ಪುಸ್ತಕಗಳು. ಇಂತಹ ಪುಸ್ತಕಗಳನ್ನು ಶರಣರು ಕೊಟ್ಟರು, ದಾಸರು ಕೊಟ್ಟರು, ಇನ್ನೂ ಅನೇಕವು ಬರುತ್ತಾನೇ ಇವೆ. ಮನುಷ್ಯ ಜೀವನದಲ್ಲಿ ಸಾಧನೆಯನ್ನು ಮಾಡುವಂತಾದ್ದು ಏನೆಂದರೆ, ಹಣದ ಹಿಂದೆ ಸಾಧನೆ ಮಾಡುತ್ತೇವೆ ಎಂದು ಹೋಗುತ್ತೇವೆ, ಮಕ್ಕಳು ಬದುಕಿನಲ್ಲಿ ಯಾವ ರೀತಿ ಸಾಧನೆ ಮಾಡಬೇಕು ಎಂದು ಯೋಚಿಸುತ್ತೇವೆ. ಆದರೆ, ಎಲ್ಲಕ್ಕಿಂತ ಮುಖ್ಯವಾಗಿ ಬೇಕಾದದ್ದು **'ಅನುಭಾವ'**. ಈ ಅನುಭಾವ ಇಲ್ಲಾಂದ್ರೆ ಮಕ್ಕಳು ಬದುಕುವುದು ಬಹಳ ಕಷ್ಟವಾಗುತ್ತದೆ. ವಾಣಿಜ್ಯೋದ್ಯಮ ಇರಲಿ, ಜವಳಿ ಇರಲಿ, ಮಠದ ಆಡಳಿತ ಇರಲಿ, ಯಾವುದೇ ಒಂದು ವ್ಯವಸ್ಥೆ ಇರಲಿ ಅಲ್ಲಿ ಅನುಭಾವ ಬಹಳ ಮುಖ್ಯವಾಗುತ್ತದೆ. ಅದಕ್ಕೆ ಅನುಭಾವಪಥ ಎಂಬ ಹೆಸರನ್ನಿಟ್ಟು ಇಂತಹ ಒಂದು ಸಂದರ್ಭದಲ್ಲಿ ಪುಸ್ತಕವನ್ನು ಬಿಡುಗಡೆ ಮಾಡುತ್ತಿರುವುದು ಬಹಳ ಸಂತಸ.

ಪುಸ್ತಕಗಳ ವಿಚಾರದಲ್ಲಿ ಮೂರು ವಿಚಾರಗಳನ್ನು ಹೇಳುತ್ತಾರೆ. ಪುಸ್ತಕಗಳು ಯಾವತ್ತೂ ಮಿತ್ರ ಸಂಹಿತಾ. ಅದೂ ಇಲ್ಲವೆಂದರೂ ಕಾಂತಾ ಸಂಹಿತವಾಗಿ ಕೆಲಸ ಮಾಡುತ್ತವೆ. ಅದೂ ಇಲ್ಲವೆಂದರೂ ಪ್ರಭು ಸಂಹಿತವಾಗಿ ಕೆಲಸ ಮಾಡುತ್ತವೆ. ಒಂದು ಪುಸ್ತಕವನ್ನು ನೀವು ವ್ಯವಸ್ಥಿತವಾಗಿ ಓದಿದರೆ ಸ್ನೇಹಿತನಾಗಿ ನಿಮಗೆ ಮಾರ್ಗದರ್ಶನವನ್ನು ಮಾಡುತ್ತದೆ. ನೀನು ಸಾಗುತ್ತಿರುವ ದಾರಿ ಸರಿಯಿದೆಯೋ ಇಲ್ಲವೋ ಎಂಬುದನ್ನು ಸ್ಪಷ್ಟವಾಗಿ ತಿಳಿಸುವ ಕೆಲಸವನ್ನು ಮಿತ್ರನಂತೆ ಒಂದು ಪುಸ್ತಕ ಮಾಡುತ್ತದೆ. ಧರ್ಮಗ್ರಂಥಗಳು ಮಾಡಿರುವ ಅದ್ಭುತವಾದ ಕೆಲಸ ಏನು ಎಂದರೆ ನಿಮ್ಮ ಪಥ ಸರಿಯಿಲ್ಲ ಅಂದಾಗ ಅದನ್ನು ಸರಿದಾರಿಗೆ ತರುವ ಕೆಲಸವನ್ನು ಪುಸ್ತಕಗಳು ಮಾಡುತ್ತವೆ. ಒಬ್ಬ ಸ್ನೇಹಿತ ಹೇಗೆ ಆತ್ಮೀಯನಾಗಿ ಬದಲಾವಣೆಗೆ ಕಾರಣನಾಗುತ್ತಾನೋ ಹಾಗೆ ಪುಸ್ತಕ ಮನುಷ್ಯನಲ್ಲಿ ಬದಲಾವಣೆಯನ್ನು ತರುತ್ತದೆ. ಅದಕ್ಕೂ ಸರಿಯಾಗಿಲ್ಲ ಅಂತಂದರೆ, ಕಾಂತಾ ಸಂಹಿತಾ ಎಂಬ ಮಾತನ್ನು ನೋಡಬೇಕು. ಕಾಂತಾ ಸಂಹಿತಾ ಅಂದರೆ ಹೆಂಡತಿಯ ಮಾತು. ಹೆಂಡತಿ ಯಾದವಳು ಗಂಡನಿಗೆ ಪ್ರೀತಿಯಿಂದ ಕೆಲವು ಮಾತುಗಳನ್ನು ಹೇಳುತ್ತಾಳೆ. ನೀವು ಮಾಡುತ್ತಿರುವುದು ಇದು ಸರಿಯಿಲ್ಲ, ನಿಮ್ಮನ್ನು ನೋಡಿ ಮಕ್ಕಳು ಕಲೀತಾರೆ, ನೀವು ಹೀಗೆ ಮಾಡಬೇಡಿ ಎಂದು ಮಾರ್ಗದರ್ಶನದ ಮಾತುಗಳನ್ನು ಹೇಳುತ್ತಾಳೆ. ಅಂತಹ ಕೆಲಸವನ್ನು ಪುಸ್ತಕಗಳು ಮಾಡುತ್ತವೆ. ಅದೂ ಆಗಿಲ್ಲವೆಂದರೆ ಪ್ರಭು ಸಂಹಿತಾ. ಒಬ್ಬ ಮನುಷ್ಯ ಹಿಂಗೇ ಇರಬೇಕು, ಇದೇ ರೀತಿಯಾಗಿ ಹೋಗಬೇಕು, ಇದೇ ರೀತಿ ಅಭ್ಯಾಸ ಮಾಡಬೇಕು ಎಂಬುದನ್ನು ಜಬರದಸ್ತ್ ಆಗಿ ಹೇಳುವಂತಹ ಮಾತು. ಈ ಕೆಲಸವನ್ನು ಪುಸ್ತಕಗಳು ಮಾಡುತ್ತವೆ. ಹೀಗೆ ಮೂರು ವಿಧದಲ್ಲಿ ಪುಸ್ತಕಗಳು ಮನುಷ್ಯನಿಗೆ ನೆರವಾಗುತ್ತವೆ.

ಈ ಪುಸ್ತಕಗಳನ್ನು ನಾವು ತುಂಬಾ ಚೆನ್ನಾಗಿ ಮಾಡಿದರೆ, ನಮ್ಮ ಮನೆಯನ್ನೇ ಒಂದು ಪುಸ್ತಕಾಲಯವನ್ನಾಗಿ ಮಾಡಿಕೊಳ್ಳ ಬಹುದು. ಬಹಳಷ್ಟು ಮನೆಗಳಿಗೆ ನಾವು ಹೋದರೆ ಇದು ಅಡುಗೆ ಮನೆ, ಇದು ಸಿಟ್‌ಔಟ್ ಅಂತ ತೋರಿಸುತ್ತಾರೆ, ಇದು ಬೆಡ್‌ರೂಂ ಅಂತ ತೋರಿಸುತ್ತಾರೆ. ಆ ಬೆಡ್‌ರೂಂನಲ್ಲಿ ಹಾಕಿರುವ ಚಿತ್ರಣವೇ ಬೇರೆ. ಸಿಟ್‌ಔಟ್ ಅಂದರೆ ಅಲ್ಲಿರುವ ಚಿತ್ರಣವೇ ಬೇರೆ, ಈಗೀಗ ಬೇರೆ ಬೇರೆ ಫ್ಯಾಶನ್ನೇ ಬಂದಾವು. ಈಗ ಮನೆ ಹೇಗಿರಬೇಕು ಅಂದರೆ ಮನೆ ಒಂದು ಗ್ರಂಥಾಲಯವಾಗಿರಬೇಕು. ಎಷ್ಟೋ ಮನೆಗಳಲ್ಲಿ ಒಳ್ಳೆಯ ಪುಸ್ತಕಗಳಿರುವ ಕಪಾಟುಗಳಿರೋದೇ ಕಡಿಮೆ. ಡ್ರೆಸ್ಸಿಂಗ್ ರೂಂಗಳಿರುತ್ತಾವೆ, ಇನ್ನೊಂದು ಸಿಗುತ್ತವೆ. ಆದರೆ, ಪುಸ್ತಕಗಳ ಕಪಾಟು ಸಿಗೋದಿಲ್ಲ. ಮನೆ ಪುಸ್ತಕಾಲಯವಾಗಬೇಕು. ಆಮೇಲೆ ಪುಸ್ತಕಗಳನ್ನು ಚೆನ್ನಾಗಿ ಓದಿದರೆ ಮನೆ ಏನಾಗುತ್ತೆ? ಮನೆ

ಮಂತ್ರಾಲಯವಾಗುತ್ತದೆ. ಮುಂದೇನಾಗಬೇಕು? ಮನೆ ನ್ಯಾಯಾಲಯವಾಗಬೇಕು. ಆಮೇಲೆ? ಆಮೇಲೆ ಮನೆ ದೇವಾಲಯವಾಗಬೇಕು. ಪುಸ್ತಕಗಳನ್ನು ಚೆನ್ನಾಗಿ ಓದುವುದರಿಂದ ಮನೆಯಲ್ಲೇ ಕುಳಿತುಕೊಂಡು ಮಂತ್ರಾಲಯ ಮಾಡಲಿಕ್ಕೆ ಬರುತ್ತದೆ; ಕೋರ್ಟ್‌ಗೆ ಹೋಗುವ ಅವಶ್ಯಕತೆ ಇರುವುದಿಲ್ಲ. ಒಳ್ಳೆಯ ಪುಸ್ತಕಗಳನ್ನು ನಾವು ಓದಿದರೆ ನಾವು ಮನೆಯಲ್ಲಿರುವ ಅಕ್ಕತಮ್ಮಂದಿರೇ ಮನೆಯಲ್ಲೇ ಮಾತಾಡಿಕೊಂಡು ಎಲ್ಲವನ್ನೂ ಪರಿಹರಿಸಿಕೊಳ್ಳುವ ವ್ಯವಸ್ಥೆ ನಿರ್ಮಾಣವಾಗುತ್ತದೆ, ಕೋರ್ಟು ಕಟ್ಟಳೆಯನ್ನು ಹತ್ತುವ ಮಾತು ಬರುವುದಿಲ್ಲ. ಮನಿಯನ್ನು ಚೆನ್ನಾಗಿ ಕಟ್ಟಿಕೊಂಡು ಹೋಗುವಂತಹಾ ವ್ಯವಸ್ಥೆ ಬರುತ್ತದೆ. ಹಾಗಾಗಿ ಮನೆ ಗ್ರಂಥಾಲಯವಾಗಬೇಕು. ಅದಾದ ಬಳಿಕ ಮನೆ ಮಂತ್ರಾಲಯವಾಗಬೇಕು; ಅಂದರೆ ಕುಳಿತುಕೊಂಡು ಚಿಂತನೆ ಮಾಡಬೇಕು. ಕೆಟ್ಟದನ್ನೆಲ್ಲ ಕಿತ್ತುಹಾಕಿ ಒಳ್ಳೆಯದನ್ನೆಲ್ಲ ತುಂಬಿಸಿಕೊಳ್ಳುವ ಕೆಲಸ ಮಾಡಿದರೆ ಮನೆ ಮಂತ್ರಾಲಯವಾಗುತ್ತದೆ.

ಇಂತಹ ಪುಸ್ತಕಗಳನ್ನು ಪರಮಪೂಜ್ಯ ಮಹಾಸ್ವಾಮಿಗಳು ಸಮಾಜಕ್ಕೆ, ದೇಶಕ್ಕೆ ಕೊಡುತ್ತಾ ಬಂದಿದ್ದಾರೆ. ಪುಸ್ತಕ ಏನು ಮಾಡುತ್ತವೆ ಎನ್ನುವುದಕ್ಕೆ ಅಲ್ಲಮನ ಒಂದು ಮಾತು ತುಂಬಾ ಚೆನ್ನಾಗಿ ಅನ್ವಯವಾಗುತ್ತವೆ. ಒಂದು ವಚನದಲ್ಲಿ ಎಲ್ಲ ಧರ್ಮಗಳ ಸಾರವನ್ನು ಅದರಲ್ಲಿ ಬಳಸಿದಂಗೆ ಮಾಡಿದ್ದಾನೆ. ಅದೇನೆಂದರೆ : **"ನೀರು ನೀರಡಸಿತ್ತು"**. ಎಂದು ಅವ ತುಂಬಾ ಚೆನ್ನಾಗಿ ಹೇಳುತ್ತಾನೆ. ನಮಗೆಲ್ಲ ನೀರಡಿಕೆಯಾಗುತ್ತದೆ, ನಮಗೆಲ್ಲ ಬಾಯಿ ಒಣಗುತ್ತದೆ. ಆದರೆ ನೀರಿಗೂ ನೀರಡಿಕೆಯಾಗುತ್ತಾ? ಹೇಳುವುದನ್ನೆಲ್ಲ ಅಲ್ಲಮ ಇಲ್ಲಿ ತುಂಬಾ ಚೆನ್ನಾಗಿಯೇ ಹೇಳಿದ್ದಾನೆ. ನೀರಿಗೆ ನೀರಡಿಕೆಯಾಗುವುದಿಲ್ಲ, ಆದರೆ ಅವನ ಪ್ರಕಾರ ನೀರಿಗೆ ನೀರಡಿಕೆಯಾಗುತ್ತದೆ. ನಿತ್ಯ ನಾವು ಬಳಸತಕ್ಕಂತಹ ವಸ್ತುಗಳನ್ನೇ ಬಳಸಿಕೊಂಡು ಮನುಷ್ಯನಿಗೆ ಹೇಳುವಂತಹ ವ್ಯವಸ್ಥೆಯನ್ನು ಅವರು ಮಾಡಿದರು. ನೀರು ಯಾವತ್ತೂ ಕೆಳಮುಖವಾಗಿ ಹರಿಯುತ್ತದೆಯೇ ಹೊರತು ಮೇಲ್ಮುಖವಾಗಿ ಹೋಗುವುದಿಲ್ಲ. ಮನಸ್ಸು ಯಾವತ್ತೂ ಕೆಳಮುಖವಾಗಿ ಹೋಗುತ್ತೇ ಹೊರತೂ ಮೇಲ್ಮುಖವಾಗಿ ಹೋಗುವುದು ಕಡಿಮೆ. ಇದಕ್ಕೆ ಅನುಭಾವಪಥ ಅಂತ ಯಾಕೆ ಹೆಸರಿಟ್ಟರು.

ನಮ್ಮ ಪರಮಪೂಜ್ಯ ಸ್ವಾಮೀಜಿಗಳು ಒಬ್ಬ ವ್ಯಕ್ತಿಗಲ್ಲ, ಲಕ್ಷಾಂತರ ಜನರಿಗೆ ಜ್ಞಾನದ ದಾಸೋಹವನ್ನು ಕೊಟ್ಟವರು. ಜೊತೆ ಅನುಭಾವಪಥವನ್ನೂ ಕೊಟ್ಟು ಅವರನ್ನು ಮೇಲಕ್ಕೆತ್ತುವಂತಹ ಕೆಲಸವನ್ನೂ ಪರಮಪೂಜ್ಯರು ಮಾಡಿಕೊಂಡು ಬಂದಿದ್ದಾರೆ. ಇಂದೂ ಈ ಕಾಲದಲ್ಲಿ ಧರ್ಮಕ್ಕೆ ಬೆಲೆ ಇದೆ, ಸ್ವಾಮಿಗಳಿಗೆ ಬೆಲೆ ಇದೆ ಎಂಬುದನ್ನು ತಾವೆಲ್ಲ ತೋರಿಸಿಕೊಟ್ಟಿದ್ದೀರಿ. ಪರಮಪೂಜ್ಯರು ಒಂದು ಭಾಗದಲ್ಲಿ ಮಾತ್ರವಲ್ಲ, ಅನುಭಾವದ ಮುಖಾಂತರವಾಗಿ, ಕಾಲೇಜುಗಳ ಮುಖಾಂತರವಾಗಿ, ಧರ್ಮದ ಮುಖಾಂತರವಾಗಿ, ಪ್ರವಚನದ ಮುಖಾಂತರವಾಗಿ, ಪ್ರಾರ್ಥನೆಯ ಮುಖಾಂತರವಾಗಿ ಮನುಷ್ಯನ ಮನಸ್ಸನ್ನು ಮೇಲ್ಮುಖವಾಗಿ ಹರಿಯುವಂತೆ ಮಾಡುವ ಕೆಲಸವನ್ನು ಶತಮಾನಗಳ ಕಾಲದಿಂದ ಮಾಡಿಕೊಳ್ಳುತ್ತಲೇ ಬಂದಿದ್ದಾರೆ.

ಪರಮಪೂಜ್ಯ ಗುರುಗಳು ನೂರ ನಾಲ್ಕನೇ ವರ್ಷವನ್ನು ಮುಗಿಸಿ ನೂರಾ ಐದನೇ ವರ್ಷಕ್ಕೆ ಪಾದಾರ್ಪಣೆ ಮಾಡುತ್ತಿರುವ ಈ ಸಂದರ್ಭದೊಳಗೆ ನಾವು ಏನನ್ನು ಪ್ರತಿಜ್ಞೆಯನ್ನು ಮಾಡಬೇಕು, ಯಾವ ಚಿಂತನೆಯನ್ನು ಮಾಡಬೇಕು ಎಂಬುದು ಮುಖ್ಯವಾಗುತ್ತದೆ. ಇಷ್ಟೆಲ್ಲ ವಿದ್ಯಾರ್ಥಿಗಳು ಬಂದರು, ಇಷ್ಟೆಲ್ಲಾ ಜನ ಬಂದರು, ಆದರೂ ನಾವು ಏನೆಲ್ಲ ಪರಿವರ್ತನೆಯಾಗಬೇಕು ಎಂಬುದನ್ನು ಚಿಂತನೆ ಮಾಡಬೇಕಾಗಿದೆ. ಪರಿವರ್ತನೆಗಾಗಿ ಮಠಗಳು ಎಲ್ಲ ಕಾಲದಲ್ಲೂ ಕೆಲಸ ಮಾಡಿದ ಇತಿಹಾಸ ನಮ್ಮಲ್ಲಿದೆ. ಒಂದೇ ಒಂದು ಉದಾಹರಣೆಯನ್ನು ನಾನು ಇಲ್ಲಿ ಕೊಡಲು ಬಯಸುತ್ತೇನೆ. ಗೋವಿಂದರಾಜು ಎನ್ನುವವರು ನಿಮಗೆಲ್ಲ ಗೊತ್ತಿರಬಹುದು, ನಮ್ಮ ಬೆಳಗಾವಿ ಜಿಲ್ಲೆಗೆ ಬಂದಿದ್ದರವರು. ಜಿಲ್ಲಾ ಪಂಚಾಯತ್ ಮುಖ್ಯಕಾರ್ಯನಿರ್ವಹಣಾಧಿಕಾರಿಯಾಗಿದ್ದವರು ಆಕಸ್ಮಿಕವಾಗಿ ನಮ್ಮ ಮಠಕ್ಕೂ ಅವರು ಬಂದಿದ್ದರು. ಶಿವರಾತ್ರಿ ದಿನ ಸಾಯಂಕಾಲ ಬಂದಿದ್ದರು. ಬಹಳ ಚಲೋ ಆಯ್ತು, ಒಂದು ಮಾಲಾ ಹಾಕಿ ಹೋಗ್ರಿ ಎಂದು ಹೇಳಿದೆ. ಮಾಲಾ ಹಾಕಿದ ಬಳಿಕ ಒಂದು ಮಾತನ್ನು ಅವರು ಹೆಮ್ಮೆಯಿಂದ ಹೇಳಿದರು; ನಾನು ಸಿದ್ಧಗಂಗಾ ಮಠದಲ್ಲಿದ್ದವನು ಅಂತ. ಒಬ್ಬ ಐಎಎಸ್ ಅಧಿಕಾರಿ ಧರ್ಮವನ್ನು ಇಟ್ಟುಕೊಂಡು, ಮಠದ ಬಗ್ಗೆ ಅಭಿಮಾನವನ್ನು ಇಟ್ಟುಕೊಂಡು, ಮಠಗಳಿಗೆ ಏನು ಕೊಟ್ಟರೂ ಅದು ಜನಗಳಿಗೆ ಮುಟ್ಟುತ್ತವೆ ಎಂಬ ಭಾವನೆಯನ್ನು ಇಟ್ಟುಕೊಂಡ ಒಬ್ಬ ಐಎಎಸ್ ಅಧಿಕಾರಿ ತಯಾರಾಗಿದ್ದು ಎಲ್ಲಿ ಎಂದು ನೋಡಿದರೆ ಸಿದ್ಧಗಂಗಾ ಮಠದಲ್ಲಿ ಎಂಬುದನ್ನು ನೋಡುತ್ತೇವೆ. ಒಂದು ರಂಗದಲ್ಲಿ ಅಲ್ಲ; ಸಾವಿರ ರಂಗಗಳಲ್ಲಿ ಅವರು ಸಿಗುತ್ತಾರೆ. ವಿಮಾನ ಪೈಲಟ್ ರಂಗದಲ್ಲಿ ನೋಡ್ರಿ, ಎಂಜಿನಿಯರಿಂಗ್ ರಂಗದಲ್ಲಿ ನೋಡ್ರಿ ಅಲ್ಲಿ ಸಿಗುತ್ತಾರೆ, ಡಾಕ್ಟರ್ ಕ್ಷೇತ್ರದಲ್ಲಿಯೂ ಸಿಗುತ್ತಾರೆ, ನ್ಯಾಯಾಲಯದ ರಂಗದಲ್ಲಿ ನೋಡಿ ಅಲ್ಲಿಯೂ ಸಿಗುತ್ತಾರೆ. ಯಾವುದೇ ರಂಗದಲ್ಲಿ ನೋಡಿದರೂ ನಮ್ಮ ಪರಮಪೂಜ್ಯರ ಶಿಷ್ಯರು ಸಿಗುತ್ತಾರೆ. ನಿಮ್ಮೆಲ್ಲರ ಮನಸ್ಸು ಊರ್ಧ್ವ ಮುಖವಾಗಿ ಹೋಗಬೇಕು ಎನ್ನುವುದಷ್ಟೇ ಇಲ್ಲಿನ ಉದ್ದೇಶ. ಅಲ್ಲಮ ಹೇಳಿದ ಹಾಗೆ ನೀರು ನೀರಡಿಸಿತ್ತು ಆಗಬಾರದು.

*(ಅನುಭಾವಪಥ ಗ್ರಂಥವನ್ನು ಲೋಕಾರ್ಪಣೆ ಮಾಡಿ ನೀಡಿದ ಆಶೀರ್ವಚನ)*







# ಯುಗಗಂಗೆಯ ರಸ ಪ್ರವಾಹ ನಿರಂತರ ಹರಿಯಲಿ

– ಶ್ರೀ ಶ್ರೀ ಶಿವಾನುಭವ ಚರಮೂರ್ತಿ
ಶಿವರುದ್ರ ಮಹಾಸ್ವಾಮಿಗಳು
ಬೇಲಿಮಠ, ಬೆಂಗಳೂರು

*ಬಾ ಎಂಬಲ್ಲಿ ಎನ್ನ ಭವಾವಳಿ ಇಟ್ಟು*
*ಸಾ ಎಂಬಲ್ಲಿ ಸರ್ವಜ್ಞಾನಿಯಾದೆನು*
*ವಾ ಎಂದು ವಜಿಸುವರೆ ವಸ್ತು ಚೈತನ್ಯಾತ್ಮಕನಾದೆ*
*ಇಂತಿ ಬಸವಾಕ್ಷರ ತ್ರಯಂಗಳು ಎನ್ನ ಸರ್ವಾಂಗದಲ್ಲಿ ವ್ಯಾಪಿಸಿರುವುದ ಕಂಡು*
*ನಾನು ನೀನು ಬಸವಾ ಬಸವಾ ಬಸವಾ ಎನ್ನುತ್ತಿರ್ದೆ ಗುಹೇಶ್ವರಾ ॥*

*ಇವನಾರವ ಇವನಾರವ ಇವನಾರವ ಎಂದೆನಿಸದಿರಯ್ಯ*
*ಇವನಮ್ಮವ ಇವನಮ್ಮವ ಇವನಮ್ಮವ ಎಂದೆನಿಸಯ್ಯ*
*ಕೂಡಸಂಗಮದೇವಾ ನಿಮ್ಮ ಮಹಾಮನೆಯ ಮಗನೆಂದೆನಿಸಯ್ಯ*

ಈಗ ಯುಗಗಂಗಾ ಎಂಬ ಸದ್‌ಗ್ರಂಥವನ್ನು ಲೋಕಾರ್ಪಣೆ ಮಾಡಿ ನಾನು ಧನ್ಯತೆಯನ್ನು ಅನುಭವಿಸುತ್ತಿದ್ದೇನೆ. ಈ ಪುಸ್ತಕಕ್ಕೆ ಹೆಸರು ಎಷ್ಟು ಚೆನ್ನಾಗಿಟ್ಟಿದ್ದಾರೆ ಎಂಬುದನ್ನು ನಾವು ನೋಡಬೇಕು. ಶತಮಾನೋತ್ಸವದ ನಂತರದ ನೂರೈದು ವರ್ಷ ತುಂಬಿದ ಎಲ್ಲ ಕಾರ್ಯಕ್ರಮಗಳು ಮತ್ತು ಎಲ್ಲ ಹಿರಿಯರ ಅನುಭಾವಿಗಳ ಅನಿಸಿಕೆಗಳನ್ನು ಒಟ್ಟು ಸೇರಿಸಿ ಈ ಗ್ರಂಥದಲ್ಲಿ ದಾಖಲಿಸಿ ಅದನ್ನು ನಮ್ಮ ನೆನಪಿನಲ್ಲಿ ಸದಾ ಉಳಿಯುವಂತೆ ಮಾಡಲಾಗಿದೆ. ಇಂತಹ ಗ್ರಂಥಕ್ಕೆ ಇಟ್ಟಿರುವ ಹೆಸರು, 'ಯುಗಗಂಗಾ'. ಯುಗದ ಉತ್ಸಾಹ ಎಂದು ಬಸವಣ್ಣನನ್ನು ಕರೆಯುತ್ತಾರೆ. ಅಂದರೆ, ಒಂದು ಯುಗ ಪೂರ್ತಿ ಎಲ್ಲ ಹೃದಯದಲ್ಲಿ ಕಗ್ಗತ್ತಲೆ ತುಂಬಿದಾಗ ಬೆಳಕಿನ ಹಬ್ಬದಂತೆ ಎಲ್ಲರ ಹೃದಯವನ್ನು ಬೆಳಗಿ ಜಗದ ಉತ್ಸಾಹವಾಗಿ ಬಸವಣ್ಣನವರು ಹನ್ನೆರಡನೇ ಶತಮಾನದಲ್ಲಿ ಮೂಡಿ ಬಂದರು. ಆದರೆ, ಪರಮಪೂಜ್ಯ ಶಿವಕುಮಾರ ಸ್ವಾಮಿಗಳವರು ಈ ಯುಗದ ಅನಂತ ಶಿವಯೋಗ ಸಾಧನೆಯ ಒಂದು ಅದ್ಭುತವಾದ ರಸಪ್ರವಾಹವಾಗಿ ತಮ್ಮ ಬದುಕನ್ನು ಅರಳಿಸಿ ಕೊಂಡಿದ್ದನ್ನು ನಾವು ನೋಡುತ್ತಾ ಇದ್ದೇವೆ. ಎಂಭತ್ತೊಂದು ವರ್ಷಗಳ ಸಾರ್ಥಕವಾಗಿರುವ ಯತಿಜೀವನದ ನೆಲೆಯಲ್ಲಿ ಪರಿಪೂರ್ಣವಾಗಿ ತಮ್ಮ ಪ್ರತಿಕ್ಷಣವನ್ನೂ ಕೂಡ ಕಾಯಕ-ಸಂವೇದನೆ, ಈ ದಾಸೋಹದಲ್ಲಿ ತಮ್ಮನ್ನು ತಾವು ಎರಕ ಹೊಯ್ದುಕೊಂಡಂತಹ ಅದ್ಭುತ ಅನುಭಾವಿಗಳು ಪರಮಪೂಜ್ಯ ಶಿವಕುಮಾರ ಸ್ವಾಮಿಗಳವರು. ಅವರ ಜೀವನದ ಒಂದೊಂದು ಕ್ಷಣವೂ ಕಾಯಕ ಮತ್ತು ದಾಸೋಹ ಹಾಗೂ **ಆತ್ಮೋನುಮೋಕ್ಷಾರ್ಥಂ ಜಗದ್ಧಿತಾಯಚ** ಎಂಬ ನೆಲೆಯಲ್ಲಿ ಈ ಎರಡು ದಡಗಳನ್ನು ಇಟ್ಟುಕೊಂಡು, ಒಂದು ತಮ್ಮ ಆತ್ಮೋದ್ಧಾರದ ಅನುಭಾವದ ನೆಲೆಯನ್ನು ಸಾಕ್ಷಾತ್ಕಾರಗೊಳಿಸಿ ಕೊಳ್ಳುವುದು, ಇನ್ನೊಂದು ಬಡಮಕ್ಕಳಿಗೆ ದಾಸೋಹದ ಮೂಲಕ ಕಗ್ಗತ್ತಲಿನ ಜೀವನವನ್ನು ಬೆಳಕಿನ ಕಿರಣಗಳನ್ನಾಗಿ ಮಾರ್ಪಡಿಸುವುದು. ಅಂತರಂಗ-ಬಹಿರಂಗದ ಈ ವಿಶಿಷ್ಟವಾದ ದಡಗಳನ್ನು ಇಟ್ಟುಕೊಂಡು ಅದರ ಮಧ್ಯದಲ್ಲಿ ಶಿವಯೋಗ ಅನುಸಂಧಾನದ ಸಾಧನೆಯ ಮೂಲಕವಾಗಿ ತಮ್ಮ ವ್ಯಕ್ತಿತ್ವವನ್ನು ಮಹಾ ಪ್ರವಾಹದಂತೆ ಲೋಕಕಲ್ಯಾಣಕ್ಕಾಗಿ ಹರಿಸಿದ ದಿವ್ಯ ಗಂಗೆಯ ಒಂದು ಮಹಾಪ್ರವಾಹದ ಚಿತ್ರಣ ಈ ಕೃತಿಯಲ್ಲಿದೆ.

ಈ ಕೃತಿಗೆ ಇಟ್ಟ ಹೆಸರು **'ಯುವಗಂಗಾ'**. ನಿಜ, ಗಂಗೆ ಪ್ರತಿಕ್ಷಣವೂ ಹೊಸತು, ಗಂಗಾ ನದಿ ಸಾವಿರಾರು ವರ್ಷಗಳಿಂದ ಹರಿತಾ ಇದೆ. ಆದರೆ ಹಾಗೆ ಹರಿಯುವ ಗಂಗೆ ಪ್ರತಿಕ್ಷಣವೂ ಹೊಸತು. ನಾವು ಗಂಗೆಯಲ್ಲಿ ಇಳಿದಾಗ ಬಲಭಾಗದಲ್ಲಿ ಇದ್ದ ನೀರು ಎಡಭಾಗದಲ್ಲಿ ಇರುವುದಿಲ್ಲ. ಕೈಯಲ್ಲಿ ತೆಗೆದುಕೊಂಡ ನೀರು ಇನ್ನೊಂದು ಕ್ಷಣದಲ್ಲಿ ಇರುವುದಿಲ್ಲ. ಅದು ನಿರಂತರವಾಗಿ ಕಾಲದ ಗತಿಯಲ್ಲಿ ಪ್ರವಾಹದ ರೀತಿಯಲ್ಲಿ ಹರಿಯುತ್ತಾ ಇರುತ್ತದೆ. ಗಂಗೆ ಎಂದರೆ ಕ್ಷಣಭಂಗುರವಾದ ನೀರಲ್ಲ, ಅನಂತ ಕಾಲದಿಂದ ಹರಿದು ಬರುತ್ತಿರುವ ರಸಪ್ರವಾಹ ಅದು. ಹಾಗೇ ಎಂಭತ್ತೊಂದು ವರ್ಷಗಳ ಸಾಧನೆ ತಪಸ್ಸಾಗಿ, ಪ್ರತಿಕ್ಷಣವೂ ಕೂಡ ಈ ದಿವಸದ ಶಿವಪೂಜೆ, ಈ ದಿವಸದ ದಾಸೋಹ, ಈ ದಿವಸದ ಅನುಸಂಧಾನ, ಈ ದಿವಸದ ಪ್ರವಚನ, ಈ ದಿವಸದ ಅಧ್ಯಯನ ಎಲ್ಲವೂ ಅನುಕ್ಷಣವೂ ಹೊಸದಾಗಿರುವ ರೀತಿಯಲ್ಲಿ ನಿರಂತರವಾಗಿ ಜಂಗಮ ಚೈತನ್ಯರ ಒಂದು ಅದ್ಭುತವಾಗಿರುವ ರಸಬುಗ್ಗೆ ಅದು ಹರಿಯುವಂತಹ ಕಲ್ಪನೆಯನ್ನು ನಾವು ರೂಪಿಸಿಕೊಳ್ಳಬೇಕು. ಎಂಭತ್ತು ವರ್ಷಗಳ ಈ ಸಾಧನೆ ಒಂದು ಅಮೃತಪದವಾಗಿ ಶಿವಯೋಗ ಸಿದ್ಧಿಯ ಬೆಳಕಾಗಿ ಇವತ್ತು ನಮ್ಮ ಕಣ್ಣ ಮುಂದೆ ಇದೆ. ಶತಮಾನೋತ್ಸವದ

ಒಂದು ಆಚರಣೆಯ ಮುಖಾಂತರವಾಗಿ ನಾವು ಕಂಡ ಬೆಳಕನ್ನು ಎಲ್ಲರ ಜೊತೆಯಲ್ಲಿ ಹಂಚಿಕೊಳ್ಳುವ ಸಂಭ್ರಮ-ಸಡಗರ ಪ್ರಾರಂಭವಾಯಿತು. ಈ ಕಾರ್ಯಕ್ರಮಗಳ ಸರಣಿಯಲ್ಲಿ ಎಲ್ಲರ ಭಾವನೆಗಳು ಓತಪ್ರೋತವಾಗಿ ರಸಗಂಗೆಯಂತೆ ಹರಿದಿದೆ. ಇದರ ಜೊತೆಯಲ್ಲಿ ಲೋಕೋತ್ತರವಾಗಿರುವ ಅನುಭಾವಿಕ ನೆಲೆಯನ್ನು ಜಗತ್ತಿಗೆ ಹಂಚಿಕೊಡುವ ನಿರಂತರವಾದ ಆ ಮಾತೃಹೃದಯದ ಕಲ್ಪನೆಯ ಸಂಕಲ್ಪಗಳು, ಅವರ ಅನಿಸಿಕೆಗಳು ಇವತ್ತು ಮಿಂಚಿನಂತೆ ಮೆರೆದು ಬಂದಂತಾದ್ದು. ಅವೆಲ್ಲವನ್ನೂ ಸಂಗ್ರಹಿಸಿ, ಶಾಶ್ವತವಾಗಿ ಹಿಡಿದಿಡುವ ಒಂದು ಅದ್ಭುತವಾದ ಪ್ರಯತ್ನ 'ಯುಗಗಂಗೆ'ಯ ರೂಪದಲ್ಲಿ ನಮ್ಮ ಕಣ್ಣಮುಂದೆ ಇದೆ.

ಈ ಗಂಗೆಯಿಂದ ನಾವು ಪಾವಿತ್ರ್ಯತೆಯುನ್ನು ತೆಗೆದುಕೊಳ್ಳಬೇಕು. ಇದರಲ್ಲಿ ಮಿಂದು ನಾವು ಪುನೀತರಾಗಬೇಕು. ಅಷ್ಟೇ ಅಲ್ಲ, ಆ ಗಂಗೆ ಹೇಗೆ ಸ್ಥಾವರವಲ್ಲವೋ ಹಾಗೇ, ನಮ್ಮ ಬದುಕಿನ ರಸವೂ ಕೂಡ ಬೆಳವಣಿಗೆ ರೂಪದಲ್ಲಿ ಹರಿಯುತ್ತಾ ಹೋಗಬೇಕು. ನಮ್ಮ ಬದುಕು ನಿರಂತರವಾಗಿ ಅರಳುವಿಕೆಯ ಮೂಲವಾಗಿ ನಮ್ಮ ಲೋಕೋತ್ತರವಾಗಿರುವ ಅಸ್ತಿತ್ವವನ್ನು ಭಗವಂತನಿಗೆ ಅರ್ಪಣೆ ಮಾಡಿಕೊಳ್ಳುವಲ್ಲಿ ಸತತ ಚೈತನ್ಯಯುಕ್ತವಾಗಿರಬೇಕು. ಇಂತಹುದೊಂದು ವಿಶೇಷವಾದ ಅಂತಃಸತ್ವವನ್ನು ತಮ್ಮ ಶತಮಾನದ ಬದುಕಿನಲ್ಲಿ ಸಹಜವಾಗಿ ಸಾಧಿಸಿ ಅದನ್ನು ಲೋಕೋತ್ತರಗೊಳಿಸಿದವರು ನಮ್ಮ ಪರಮಪೂಜ್ಯರು. ಮಾಡುವ ಕ್ರಿಯೆಯಲ್ಲಿ ತಾನಿಲ್ಲದಂತೆ ಮಾಡುವಾತ ನಾನಲ್ಲ, ನೀಡುವಾತ ನಾನಲ್ಲ, ಬೇಡುವಾತ ನಾನಲ್ಲ ... ಎನ್ನುವ ರೀತಿಯಲ್ಲಿ ಮಾಡುವ ಮಾಟದಲ್ಲಿ ತಾನಿಲ್ಲದಿರುವ ಕ್ರಿಯೆಯನ್ನು ಸಹಜವಾಗಿ ರೂಪಿಸಿಕೊಂಡು ಇವತ್ತು ವಿಶ್ವ ಚೈತನ್ಯವನ್ನು ಅರಳಿಸಿಕೊಂಡು ಉದಾಹರಣೆಯಾಗಿ, ನಮಗೆ ಮಾರ್ಗದರ್ಶಿಯಾಗಿ ನಿಂತಿರುವ ಮಹಾ ಚೈತನ್ಯದ ಅದ್ಭುತವಾದ ಅನುಭಾವಿಕ ನೆಲೆಯ ಕೆಲವು ತುಣುಕುಗಳು ಈ ಗ್ರಂಥದಲ್ಲಿ ಸಿಕ್ಕರೆ ಅದು ನಮ್ಮ ಹೃದಯದ ಕಗ್ಗತ್ತಲಿಗೆ ಒಂದು ವಿಶೇಷವಾದ ಮಿಂಚಿನ ಬೆಳಕಾಗಿ ಹೊಸ ಆಯಾಮವನ್ನು ಕೊಟ್ಟರೆ, ನಿರಂತರವಾಗಿ ನಮ್ಮ ಸ್ಫೂರ್ತಿಗೆ ಚೇತನವಾದರೆ ಲೋಕೋತ್ತರವಾಗಿರುವ ಈ ಗ್ರಂಥದ ಲೋಕಾರ್ಪಣೆ ನಿಜಕ್ಕೂ ಸಾರ್ಥಕವಾಗುತ್ತದೆ, ನಮ್ಮೆಲ್ಲರ ಬದುಕಿನ ಬೆಳಕಾಗುತ್ತದೆ.

ಈ ಕೃತಿಯ ಸಂಯೋಜಕರು ನಮ್ಮ ಆಚರಣೆಗಳನ್ನೆಲ್ಲ ಸಂಗ್ರಹಿಸಿ ನಮ್ಮ ಕಣ್ಮುಂದೆ ತೆರೆದಿರಿಸಿದ್ದಾರೆ. ಇದು ಮಸುಕು ಮಸುಕಾಗಿರುವ ನಮ್ಮ ಹಿಂದಿನ ಕಲ್ಪನೆಗಳಿಗೆ ಬೆಳಕು ಚೆಲ್ಲುವ ಪ್ರಯತ್ನ. ಮುಂದೆಯೂ ಕೂಡ ಇಂತಹ ಪ್ರಯತ್ನಗಳು ನಿರಂತರವಾಗಿ ನಡೆಯುತ್ತಿರಬೇಕು. ಇದು ೧೦೫ರ ವರೆಗಿನ ವಿಚಾರವಾಯ್ತು. ಮುಂದೆಯೂ ಇದು ಹರಿಯುತ್ತಿರಬೇಕು. ಯುಗಗಂಗೆಯ ರಸಪ್ರವಾಹ ಹರಿಯುತ್ತಲೇ ಇರಬೇಕು. ಇದು ಪರಿಪೂರ್ಣ ಎಂದು ನಾನು ಹೇಳುವುದಿಲ್ಲ. ಮುಂದಿನ ಸಂಚಿಕೆಗೆ ನಮ್ಮನ್ನು ಕಾತರಿಸುವಂತೆ ಮಾಡಬೇಕು.

ಶುಭಂ ಭೂಯಾತ್ ಸರ್ವರಿಗೂ ಶರಣಾರ್ಥಿ.

(ಯುಗಗಂಗಾ ಗ್ರಂಥ ಬಿಡುಗಡೆ ಮಾಡಿ ನೀಡಿದ ಆಶೀರ್ವಚನ ಪೂರ್ಣಪಾಠ)

❑

ಆನೆಯನೇರಿಕೊಂಡು ಹೋದಿರೆ ನೀವು?
ಕುದುರೆಯನೇರಿಕೊಂಡು ಹೋದಿರೆ ನೀವು?
ಕುಂಕುಮ ಕಸ್ತೂರಿಯ ಪೂಸಿಕೊಂಡು, ಹೋದಿರೆ ಅಣ್ಣಾ
ಸತ್ಯದ ನಿಲವನರಿಯದೆ ಹೋದಿರಲ್ಲಾ!
ಸದ್ಗುಣವೆಂಬ ಫಲವ ಬಿತ್ತಿ ಬೆಳೆಯದೆ ಹೋದಿರಲ್ಲಾ,
ಅಹಂಕಾರವೆಂಬಸದ ಮದ ಗಜವೇರಿ
ವಿಧಿಗೆ ಗುರಿಯಾಗಿ ನೀವು ಹೋದಿರಲ್ಲಾ!
ನಮ್ಮ ಕೂಡಲ ಸಂಗಮ ದೇವರನರಿಯದೆ
ನರಕಕ್ಕೆ ಭಾಜನವಾದಿರಲ್ಲಾ.

ಆನೊಬ್ಬನು, ಸುಡುವರೈವರು;
ಮೇಲೆ ಸಿಚ್ಚು ಘನ; ನಿಲಲು ಬಾರದು;
ಕಾಡ ಬಸವನ ಹುಲಿ ಕೊಂಡೊಯ್ವರೆ
ಆರಯ್ಯಲಾಗದೆ, ಕೂಡಲ ಸಂಗಮದೇವಾ?
ಮೇಲಾಗಲೊಲ್ಲೆನು ಸೀಳಾಗಲೊಲ್ಲದೆ;
ಸೀಳಿಂಗಲ್ಲದೆ ಹಯನ ಕರೆವುದೇ?
ಮೇಲಾಗಿ ಸರಕದೊಳೋಲಾಡಲಾರೆನು;
ನಿಮ್ಮ ಶರಣರ ಪಾದಕ್ಕೆ ಸೀಳಾಗಿರಿಸು,
ಮಹಾದಾನಿ, ಕೂಡಲ ಸಂಗಮದೇವಾ.

– ಬಸವಣ್ಣ







# ಪೂಜ್ಯ ಶ್ರೀಗಳವರಲ್ಲಿ ಬಸವೇಶ್ವರನ್ನು ಕಾಣುತ್ತೇವೆ

– ದೇ. ಜವರೇಗೌಡರು
ವಿಶ್ರಾಂತ ಕುಲಪತಿಗಳು,
ಮೈಸೂರು ವಿಶ್ವವಿದ್ಯಾನಿಲಯ.

ಪ್ರಪ್ರಥಮವಾಗಿ ನನ್ನೆಲ್ಲ ಶ್ರೇಯಸ್ಸಿಗೆ ಕಾರಣರಾದ ಪರಮಪೂಜ್ಯ ಗುರುದ್ವಯರಿಗೆ ಭಕ್ತಿಪೂರ್ವಕವಾಗಿ ನಮಸ್ಕರಿಸುತ್ತೇನೆ. ಕನ್ನಡ ನಾಡಿನ ದೇದೀಪ್ಯಮಾನವಾದ ದಿವ್ಯ ಧರ್ಮಜ್ಯೋತಿ ಯಂತಿರುವ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರಸ್ವಾಮಿಗಳ ಪಾದಾರವಿಂದಗಳಲ್ಲಿ ಭಕ್ತಿಗೌರವ ಪೂರ್ವಕವಾಗಿ ನುಡಿಯುತ್ತೇನೆ. ನಾನೆಲ್ಲಿರಲಿ ಅವರ ಶಿವಮಯ ಮಾತೃವಾತ್ಸಲ್ಯ ಸದೃಶ ಮಂದಹಾಸದ ನೆನಪಿನಲ್ಲಿ ಮಿಂದು ನನ್ನ ಜನ್ಮಸಾರ್ಥಕವಾಗಿದೆ. ಈ ಪವಿತ್ರ ಸಿದ್ಧಗಂಗೆಯಲ್ಲಿ ನಾನು ಆಧುನಿಕ ಕಲ್ಯಾಣವನ್ನು ಕಂಡಿದ್ದೇನೆ, ಬಸವಾದಿ ಶರಣರ ಆತ್ಮಜ್ಯೋತಿಯೂ ಸಂಸ್ಪರ್ಶವನ್ನನು ಭವಿಸಿದ್ದೇನೆ. ಸುಮಾರು ಅರ್ಧ ಶತಮಾನದಿಂದ ಪೂಜ್ಯ ಶ್ರೀಗಳ ಆಶೀರ್ವಾದಕ್ಕೆ ಪಾತ್ರನಾಗಿರುವ ಸೌಭಾಗ್ಯ ನನ್ನದಾಗಿದೆ.

ನನಗೆ **'ಕರ್ನಾಟಕರತ್ನ'** ಪ್ರಶಸ್ತಿ ಲಭಿಸಿದ ಸಂದರ್ಭದಲ್ಲಿ ಪೂಜ್ಯರು ಬರೆದ ಆಶೀರ್ವಾದ ರೂಪದ ಪತ್ರ ನನಗೆ ಶಿವರಕ್ಷೆ ಮಾತ್ರವಲ್ಲ ಮಂತ್ರದೀಕ್ಷೆಯಾಗಿದೆ. ನಾನು ಪಡೆದಿರುವ ಎಲ್ಲ ಪ್ರಶಸ್ತಿಗಳಿಗೆ ಪವಿತ್ರತಮವಾದದ್ದೆಂದು ನಂಬಿ ಅದನ್ನು ಆಗಾಗ್ಗೆ ಕಣ್ಣಿನ ಮೂಲಕ ಹೃನ್ಮನಗಳ ಪೂಜೆ ಸಲ್ಲಿಸುತ್ತೇನೆ. ಅದು ನನ್ನ ಚೈತನ್ಯವನ್ನು ಉದ್ದೀಪನಗೊಳಿಸುತ್ತದೆ. "ಕನ್ನಡನಾಡು ನುಡಿಗೆ ನೀವು ಸಲ್ಲಿಸುತ್ತ ಬಂದಿರುವ ಸೇವೆಗೆ ಸಂದ ಸುಯೋಗ್ಯ ಪುರಸ್ಕಾರವಿದು ಎಂದು ಭಾವಿಸುತ್ತೇನೆ. ಬಸವ ಭಾನುವಿನ, ಕವಿಗುರು ಕುವೆಂಪು ಅವರ ಆಶೀರ್ವಾದ ಭಾಗ್ಯವಿಶೇಷವಿದಾಗಿದೆ. ಕನ್ನಡ ನಿಮಗೆ ಗುರು, ದೈವ, ಪ್ರಾಣವಾಗಿ ಮುನ್ನಡೆಸಿದೆ. ಜಗತ್ತಿನ ಎಲ್ಲ ಸಂತರ, ಅನುಭಾವಿಗಳ ದಾರ್ಶನಿಕ ಕೃತಿಘನಗಳನ್ನು ತಲಸ್ಪರ್ಶಿಯಾಗಿ ಆತ್ಮಸಾತ್ ಮಾಡಿಕೊಂಡಿರುವ ನಿಮ್ಮಿಂದ ಬಸವಣ್ಣನವರ ಕುರಿತಾಗಿ ಅರಳಿದ ಸಾಹಿತ್ಯ ನಮಗಂತೂ ಅತ್ಯಂತ ಪ್ರಿಯವಾಗಿದೆ. ಅದೆಷ್ಟು ಬಾರಿ ಅವಲೋಕಿಸಿದರೂ ಮತ್ತೆ ಮತ್ತೆ ಓದಬೇಕೆನಿಸುತ್ತದೆ. ನಿಮ್ಮ ಸದಭಿಪ್ರಾಯ ಸಮಗ್ರ ಕ್ರಾಂತಿಯ ಮೂಲಪುರುಷ ಬಸವಣ್ಣ ಎಂಬುದಂತೂ ಚಿಂತನೀಯ ಚಿಂತಾಮಣಿಯಾಗಿದೆ." ಪೂಜ್ಯರ ಆಶೀರ್ವಾದ ರೂಪದ ವಾಗಮೃತದಿಂದ ನಾನು ಪುನೀತನಾಗಿದ್ದೇನೆ, ಏಳ್ಗೆಯ ಏಣಿಯನ್ನು ಏರಿದ್ದೇನೆ, ಜೀವನದಲ್ಲಿ ಸಂಪೂರ್ಣ ತೃಪ್ತಿ ಪಡೆದಿದ್ದೇನೆ.

ಭರತಖಂಡ ವೇದೋಪನಿಷತ್ತು ಭಗವದ್ಗೀತೆಗಳ ಮುಂದೆಲೆಯಾದರೂ, ಹಲವು ಅವತಾರ ಪುರುಷರ, ಸಾಧು ಸಂತರ, ಧರ್ಮಪೀಠಗಳ ಜನ್ಮಸ್ಥಳವಾದರೂ ಯಾವ ದೇಶ ದಲ್ಲಿಯೂ ಕಾಣದ ಭ್ರಷ್ಟಾಚಾರ ಅಧರ್ಮಗಳಲ್ಲಿ ತುಂಬಿ ತುಳುಕುತ್ತಿವೆ. ಇಲ್ಲಿರುವಷ್ಟು ಅನಿಷ್ಟಗಳು ಬೇರಾವ ದೇಶದಲ್ಲಿಯೂ ಇಲ್ಲ. ಈ ದೇಶದ ಬದುಕಿನ ಮರುಭೂಮಿಯಲ್ಲಿ ಸಿದ್ಧಗಂಗೆಯಂಥ ಬೆರಳೆಣಿಕೆಯ ಓಯಸಿಸ್‌ಗಳಿರುವುದು ಧೈರ್ಯಾವಕ ಸಂಗತಿ, ನಿಜ. ಆದರೂ ಕ್ರಮ ಕ್ರಮೇಣ ಪತನಾಭಿಯಾಗುತ್ತಿರುವ ನೈತಿಕತೆಯಿಂದಾಗಿ ವಿನಾಶದ ಅಂಚಿಗೆ ನೂಕುತ್ತಿರುವ ಭುವನ ಕಂಪನ ಕಾರಿಯಾದ ದೌಷ್ಟ್ಯ ದೌರ್ಜನ್ಯ ಪೀಡೆ ಪುಂಡಾಟಗಳಿಂದಾಗಿ ಸಜ್ಜನರು ಆತಂಕದ ಬೆಂಕಿಯಲ್ಲಿ ಬೇಯುತ್ತಿದ್ದಾರೆ.

ರಾಷ್ಟ್ರಜೀವನದ ಎಲ್ಲ ಕ್ಷೇತ್ರಗಳೂ ಮಾಲಿನ್ಯದ ಕೂಪ ಗಳಾಗಿರುವುದರಿಂದ, ಅವುಗಳ ನಿರ್ಮಲೀಕರಣ ಸಮಗ್ರ ಕ್ರಾಂತಿಯಿಂದ ಮಾತ್ರ ಸಾಧ್ಯವೆಂದು ಬಸವೇಶ್ವರರು ಹನ್ನೆರಡನೆಯ ಶತಮಾನದಲ್ಲಿಯೇ ಮನಗಂಡಿದ್ದರು, ಪ್ರಾಣದ ಹಂಗು ತೊರೆದು ಕ್ರಾಂತಿಯ ರೂಪುರೇಷೆಗಳನ್ನು ರಚಿಸಿದ್ದರು. ಮಾನವೀಯತೆ, ಸಾಮಾಜಿಕ ನ್ಯಾಯ, ಅಸ್ಪೃಶ್ಯತಾ ನಿವಾರಣೆ, ಲಿಂಗ, ಜಾತಿ, ವರ್ಣ, ವರ್ಗ ಭೇದ ನಿರ್ಮೂಲನ, ಆರ್ಥಿಕ ಸಮಾನತೆ, ಧಾರ್ಮಿಕ ಸಮೀಕರಣ, ಇವು ಆ ಕ್ರಾಂತಿಯ ಗುರಿಗಳಾಗಿದ್ದವು. ಸಮಾಜವಾದಿಯಾದ ಅವರು ಆಸ್ತಿಸಂಚಯ ಕಳ್ಳತನವೆಂದು ಘೋಷಿಸಿದರು. ಮೌಢ್ಯವಿರೋಧಿಯಾಗಿದ್ದ ಅವರು ವೈಚಾರಿಕತೆಗೆ ಒತ್ತು ಕೊಟ್ಟರು. **'ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ'** ಶರಣರು ಲೋಕದ ಸತಿಯ ಕೈಹಿಡಿದು ನಿರ್ವಾಣಸತಿಯನಪ್ಪಿದರು' ಎಂಬುದಾಗಿ ನುಡಿದು, ಸಾಂಸಾರಿಕ ವ್ಯವಸ್ಥೆಯ ಹಿರಿಮೆಯನ್ನು

ಎತ್ತಿ ಹಿಡಿದರು. ಸರ್ವಯೋಗಗಳ ಸಮನ್ವಯ ಸಿದ್ಧಾಂತಗಳಂತಿರುವ ಕಾಯಕದಾಸೋಹಗಳ ಮೂಲಕ ಆರ್ಥಿಕ ಸಮಾನತೆ ಹಾಗೂ ಸುಖಶಾಂತಿಗಳು ಸಾಧ್ಯವೆಂದು ನ್ಯಾಯ ನಿಷ್ಠುರಿಯಾದ ಅವರು ಸ್ಪಷ್ಟಪಡಿಸಿದರು. ಸತ್ಯ, ಅಸ್ತೇಯಾದಿ ಸಂಗತಿಗಳನ್ನೊಳಗೊಂಡ ನೈತಿಕತೆ, ವಿವೇಕ, ತಾರತಮ್ಯ, ವರ್ಜನೆ ಧರ್ಮದ ಅಡಿಪಾಯಗಳೆಂದು ಪ್ರಚುರಪಡಿಸಿದರು. ಅವರು ಪ್ರಜಾಪ್ರಭುತ್ವವಾದಿ ಮಾತ್ರವಲ್ಲ ಸಮಾಜವಾದದಿಂದಲೂ ಹೌದು, ಅವರು ಆಧ್ಯಾತ್ಮಿಕ ಮಾರ್ಗದರ್ಶಿ ಯೆಂಬುದೂ ಸತ್ಯಸ್ಯ ಸತ್ಯ. ಸಮಾಜದ ಉತ್ಥಾನಕ್ಕೆ ಪ್ರತಿಯೊಬ್ಬ ವ್ಯಕ್ತಿಯ ಪ್ರತಿಭೆ ಅಗತ್ಯವೆಂದವರು ಬಗೆಗಿದ್ದರು. **'ಕಂಗಳು ತುಂಬಿದ ಬಳಿಕ ನೋಡಲಿಲ್ಲ', 'ಜಗವ ಸುತ್ತಿಪ್ಪುದು ನಿನ್ನ ಮಾಯೆಯಲ್ಲಾ'** ಇವೇ ಮೊದಲಾದ ವಚನಗಳ ಕಡೆಗೆ ಗಮನಹರಿಸಿದಾಗ, ಬಸವೇಶ್ವರು ಆಧ್ಯಾತ್ಮಸಿದ್ಧಿಯ ಪರಾಕಾಷ್ಠೆಯನ್ನು ತಲುಪಿದ್ದರೆನ್ನುವುದು ಸ್ಪಷ್ಟವಾಗುತ್ತದೆ. ಅಂತರಂಗಶುದ್ಧಿ ಬಹಿರಂಗಶುದ್ಧಿಗಳ ಆಗತ್ಯವನ್ನು ಎತ್ತಿ ಹಿಡಿಯುತ್ತಾರೆ.

ಮಾರ್ಕ್ಸ್‌ನೂ ಸೇರಿದಂತೆ ಜಗತ್ತಿನ ಎಲ್ಲ ಚಿಂತಕರ, ವೇದೋಪನಿಷತ್ತು, ಬೈಬಲ್, ಕುರ್-ಆನ್‌ಗಳ ಸಾರವೆಲ್ಲವೂ ಮಹಾಕಾವ್ಯಗಳ ಸಂಪತ್ತೆಲ್ಲವೂ ಬಸವೇಶ್ವರರ ವಚನಗಳಲ್ಲಿ ಭಟ್ಟಿಯಿಳಿದಂತೆ ತೋರುತ್ತದೆ. ಪ್ಲೇಟೋ ಅರಿಸ್ಟಾಟಲ್ ಮೊದಲಾದ ತಾತ್ವಿಕರ ಹಾಗೂ ದಾರ್ಶನಿಕರ ಚಿಂತನಗಳು ಅವರ ವಚನಗಳಲ್ಲಿ ದ್ರವಿಸಿರುವಂತೆ ಭಾಸವಾಗದಿರಲಾರದು. ವಾಸ್ತವಾದರ್ಶಗಳ ಸಮನ್ವಯವೇ ಅವರ ಬದುಕು. ಹೀಗಾಗಿ ಅವರು ಜಗತ್ತಿನ ಮಹಾಸಂತರೂ ಹೌದು, ಪ್ರವಾದಿಯೂ ಹೌದು, ದೇಶದ ಸಕಲ ಸಮಸ್ಯೆಗಳಿಗೆ ಬಸವೇಶ್ವರರ ವಚನಗಳಲ್ಲಿ ಪರಿಹಾರವಿದೆಯೆಂದು ಬಸವೇಶ್ವರರ ಬೌದ್ಧಿಕ, ಆಧ್ಯಾತ್ಮಿಕ ಆಸ್ತಿಗೆ ವಾರಸುದಾರದಂತಿರುವ ಗುರು ಕುವೆಂಪು ಅವರು ಹೇಳುತ್ತಿದ್ದುದುಂಟು. ಈ ಸಂದರ್ಭದಲ್ಲಿ ಇತರ ಶರಣ ಶರಣೆಯರ ವಚನಗಳನ್ನು ನೆನೆಯಬಹುದು.

ಸಾಂಸ್ಕೃತಿಕ ವೈಭವದ ದೃಷ್ಟಿಯಿಂದ ಪ್ರತಿಭಾ ವೈವಿಧ್ಯ ಸಂಪತ್ತಿನ ಮಹಿಮೆಯ ದೃಷ್ಟಿಯಿಂದ ಹನ್ನೆರಡನೆಯ ಶತಮಾನದ ಕರ್ನಾಟಕಕ್ಕೆ ಸಾಟಿಯಾದ ರಾಷ್ಟ್ರ ಜಗತ್ತಿನಲ್ಲಿ ಮತ್ತೊಂದಿಲ್ಲ. ದೇಶದ ನಾನಾಮೂಲೆಗಳಿಂದ ಕಲ್ಯಾಣಕ್ಕೆ ಬಂದ ಮುನ್ನೂರು ಮಂದಿ ಶರಣ ಶರಣೆಯರು ಜಗತ್ತಿನ ಕಲ್ಯಾಣಕ್ಕಾಗಿ, ಮಾನವನ ಕಲ್ಯಾಣಕ್ಕಾಗಿ ನಡೆಸಿದ ಧ್ಯಾನ, ತಪಸ್ಸು, ಚಿಂತನೆ, ಚರ್ಚೆ ಹಾಗೂ ಬರಹಗಳು ಸಾರ್ವತ್ರಿಕ ಸಾರ್ವಕಾಲಿಕ ಮೌಲ್ಯಗಳಿಂದ ಕೂಡಿವೆ. ಪ್ರಾಚೀನ ಋಷಿ ಸಂತರ ಕವಿಗಳ ಆಚಾರ್ಯರ ಅವತಾರ ಪುರುಷರ, ಪ್ರವಾದಿಗಳ ಚಿಂತನೆಗಳ ಸಾರಭೂತವಾದ ಅಂತರ್ಜಲವೇ ಅಮೂಲ್ಯಗಳೆಂದು ಹೇಳಬಹುದಾಗಿದೆ. ಇಷ್ಟೊಂದು ಚೇತನಗಳು ಏಕಕಾಲದಲ್ಲಿ ಏಕತ್ರ ಒಟ್ಟುಗೂಡಿ ಚಿಂತಿಸಿ, ಚರ್ಚಿಸಿ, ಅಪಾರ ಸಾಹಿತ್ಯವನ್ನು ಸೃಷ್ಟಿಸಿದ್ದು ಜಗತ್ತಿನ ಇತಿಹಾಸದಲ್ಲಿಯೇ ಕಾಣದ ಸಂಗತಿ. ಅಲ್ಲಿ ಸೃಷ್ಟಿಗೊಂಡ ಸಾಹಿತ್ಯ ಸಂಪ್ರದಾಯಕ ಆಸ್ಥಾನ ಸಾಹಿತ್ಯವಲ್ಲ, ಕೇವಲ ಪಂಡಿತರ ಮನರಂಜನ ಸಾಹಿತ್ಯವಲ್ಲ, ಕೃತಕ ಜಡ ಸಾಹಿತ್ಯವಲ್ಲ, ಮೃಣ್ಮಯ ಸಾಹಿತ್ಯವಲ್ಲ. ಅದು ಶಿವಸಾಹಿತ್ಯ, ಸರ್ವೋದಯ ಸಾಹಿತ್ಯ, ಅಂತ್ಯೋದಯ ಸಾಹಿತ್ಯ, ಜೀವನ ಸಾಹಿತ್ಯ, ಚಿನ್ಮಯ ಸಾಹಿತ್ಯ. ಆ ಸಾಹಿತ್ಯದಿಂದ ಉಪಲಬ್ಧವಾದದ್ದೇ ಬಸವ ಧರ್ಮ. ಜೀವನದ ಸಕಲ ಸಮಸ್ಯೆಗಳಿಗೂ ಪರಿಹಾರ ನೀಡುವ ವಿಶ್ವಧರ್ಮ ಮಾನವ ಧರ್ಮ. ವಚನ ಸಾಹಿತ್ಯದೊಂದಿಗೆ ಈ ಧರ್ಮ ತಳುಕು ಹಾಕಿಕೊಂಡಿಯೆಂಬುದಂತು ನಿಜ. ಪ್ರತಿನಿತ್ಯದ ವಚನ ಪಾರಾಯಣದಿಂದ ಬದುಕು ಮಡಿಯಾಗುತ್ತದೆ. ಸಮಾಜದಲ್ಲಿ ಸುಖಶಾಂತಿ ಏಳ್ಗೆಗಳು ಪಲ್ಲವಿಸುತ್ತೆಂಬುದರಲ್ಲಿ ಅತಿಶಯೋಕ್ತಿಯಿಲ್ಲ.

ನಾನು ಪೂಜ್ಯಶ್ರೀಗಳಲ್ಲಿ ತ್ರಿವಿಧ ದಾಸೋಹಿ, ವಿಶ್ವಪ್ರೇಮಿ, ಕನ್ನಡನಾಡಿನ ಭಾಗ್ಯವಿಧಾತ ಬಸವೇಶ್ವರರನ್ನು ಕಾಣುತ್ತೇನೆ. ಅವರ ಹರಕೆನುಡಿಗಳಲ್ಲಿ, ಮುಗುಳುನಗೆಯಲ್ಲಿ ಗುರುಕೃಪೆಯನ್ನು ಮಾತಾಪಿತೃವಾತ್ಸಲ್ಯವನ್ನು ಅನುಭವಿಸುತ್ತೇನೆ. ಕನ್ನಡಿಗರಿಗೆ **'ಸಿದ್ಧಗಂಗಾ'** ಪವಿತ್ರನಾಮ. ಆ ಹೆಸರಿನ ಪ್ರಶಸ್ತಿಯನ್ನು ಪಡೆಯುವ ಭಾಗ್ಯಕ್ಕಾಗಿ ಪೂಜ್ಯಶ್ರೀಗಳ ಪಾದಾರವಿಂದದಲ್ಲಿ ಭಕ್ತಿಪೂರ್ವಕವಾಗಿ ನಮಸ್ಕರಿಸುತ್ತೇನೆ. ಅವರು ಹತ್ತಾರು ಹತ್ತಾರು ವರ್ಷ ನಮ್ಮೊಡಗಿದ್ದು ನಮ್ಮನ್ನು ಹರಸುತ್ತಿರಬೇಕೆಂಬುದು ನಮ್ಮ ಹಂಬಲ ಹಾಗೂ ಮೌನ ಪ್ರಾರ್ಥನೆ. ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳಿಗೆ ನನ್ನ ಗೌರವಪೂರ್ವಕ ನಮನಗಳು. ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘದ ಸದಸ್ಯರಿಗೆ, ಮುಖ್ಯವಾಗಿ ಡಾ|| ಎಂ.ಎಸ್. ಚನ್ನಬಸಪ್ಪ, ಶ್ರೀ ಕೆ.ಎಚ್. ಶಿವರುದ್ರಯ್ಯ ಹಾಗೂ ಶ್ರೀ ಹೆಚ್.ವಿ. ವೀರಭದ್ರಯ್ಯನವರಿಗೆ ಹೃತ್ಪೂರ್ವಕ ವಂದನೆಗಳು. □

**ಶ್ರೀವಾಣಿ**

ಯಾರಾದರೂ ಮಹಾಕವಿಯ, ಮಹಾಸಂತನ ದೊಡ್ಡ ಅನುಭವಿಯ ಒಂದು ವಾಕ್ಯವನ್ನು ಕಂಠಪಾಠ ಮಾಡಿದರೆ ಇಡೀ ಜೀವಮಾನಕ್ಕೆ ಅದು ಕಾಣಿಕೆಯಾಗಿ ಸೇವೆ ಸಲ್ಲಿಸುತ್ತದೆ.





## ಸ್ವಧರ್ಮದಲ್ಲಿ ಶ್ರದ್ಧೆ-ಇತರ ಧರ್ಮಗಳ ಬಗ್ಗೆ ಗೌರವ
## ದಯೆಯೇ ಧರ್ಮದ ಮೂಲವಾಗಬೇಕು

– ಅರವಿಂದ ಜತ್ತಿ
ಅಧ್ಯಕ್ಷರು, ಬಸವ ಸಮಿತಿ, ಬೆಂಗಳೂರು.

ಧಾರ್ಮಿಕ ಸಮ್ಮೇಳನದ ವಸ್ತುವಿನ ಅಂತರಂಗದ ಧ್ವನಿ 'ಧರ್ಮ'. ಇದು ಪ್ರಾಯಶಃ ಕೇವಲ ಧಾರ್ಮಿಕ ಸಮ್ಮೇಳನದ ವಿಷಯವಲ್ಲದೆ, ಪೂಜ್ಯರ ೧೦೫ ವರ್ಷಗಳ ಅನುಭಾವದ ಧ್ವನಿಯೂ ಸಹ ಎಂದು ಭಾವಿಸುತ್ತೇನೆ. ಇದು ಬಸವಾದಿ ಶರಣರ ಧ್ವನಿಯೂ ಸಹ ಆಗಿದೆ. ಈ ವಿಷಯವನ್ನು ಪೂಜ್ಯ ಶ್ರೀಗಳು ಸಮ್ಮೇಳನದ ಕೇವಲ ಒಂದು ವಸ್ತುವಾಗಿ ನೀಡದೆ, ನನ್ನ ಭಾವನೆಯಲ್ಲಿ ಭವಿಷ್ಯವಾಣಿಯ ಎಚ್ಚರಿಕೆಯ ಘಂಟೆಯೂ ಸಹ ವಿಷಯದಲ್ಲಿ ಪ್ರತಿಧ್ವನಿಸುತ್ತಿದೆ.

ಧರ್ಮ-ನಿಘಂಟುವಿನ ಅರ್ಥ ಜಗತ್ತಿನ ಸ್ಥಿತಿಗತಿಗಳ ದೃಷ್ಟಿಯಿಂದ ನಿಷ್ಠೆಯಿಂದ ಸಮಷ್ಟಿಯೂ ಪಾಲಿಸಬೇಕಾದುದು- ವಾಡಿಕೆ/ಕಟ್ಟಳೆ/ವಿಧಿ/ಆಚಾರ/ವಿಹಿತವಾದ ಆಚರಣೆ/ಕರ್ತವ್ಯ. ಆದರೆ, ಇಂದು ಧರ್ಮ ಸಮಾಜದ ಅರಿವಿಗೆ ಬಾರದಂತೆ ಮಾಯೆಯ ಪ್ರಭಾವಕ್ಕೆ ಒಳಗಾಗಿ ಮತ ಧರ್ಮವೆಂಬ ಚೌಕಟ್ಟಿನಲ್ಲಿ ಪ್ರತಿಬಿಂಬಿತವಾಗುತ್ತದೆ. ಹೀಗಾಗಿ, ಮತವೇ 'ಧರ್ಮ' ಎಂಬ ಭಾವನೆ ಗಟ್ಟಿಗೊಂಡಾಗ ಮತ್ತೆ ವಾಸ್ತವ ಹೊಸ ರೂಪ ತಾಳುತ್ತದೆ. ಹೊಸ ರೂಪದಲ್ಲಿ ಧರ್ಮ ಎನ್ನತಕ್ಕಂತಹ ವಿಶಾಲ ಭಾವನೆಗಳ ಆರಾಧಕರಾಗಿರುವ ಅನೇಕರು ಹತಾಶರಾಗುತ್ತಾರೆ. ಆದರೆ, ಸಮಾಜ ಧರ್ಮ ಎಂಬ ಶಬ್ದವನ್ನು ಮೂಲ ಆಶಯದಲ್ಲಿ ಕೇವಲ ನುಡಿಯುತ್ತ ನಡೆಯಲ್ಲಿ ಮತವನ್ನಾಗಿ ಆಚರಿಸುವ ದುರಂತ ಎದ್ದು ಕಾಣುತ್ತಿದೆ. ಹಾಗಾಗಿ ದುರಾದೃಷ್ಟವಶಾತ್ 'ಧರ್ಮ' ತನ್ನ ಅಸ್ತಿತ್ವವನ್ನೇ ಕಳೆದು ಕೊಳ್ಳುವುದೇನೋ ಎಂಬ ಆತಂಕ.

ಈ ಆತಂಕದ ಭಾವನೆಗೆ ಪೂರಕವಾಗಿ ಇತ್ತೀಚೆಗೆ ವಿಜಯಕರ್ನಾಟಕ ದಿನಪತ್ರಿಕೆಯಲ್ಲಿ 'ವಿನಾಶದ ಹಾದಿಯಲ್ಲಿ ಧರ್ಮ....' ಲೇಖನ ಗಮನಿಸಿದೆ. ಈ ಲೇಖನ ಎ.ಎಸ್.ಐ. ಲಂಡನ್ ಸಂಸ್ಥೆಯ ಸಮೀಕ್ಷೆಯ ವರದಿಯನ್ನು ಆಧರಿಸಿತ್ತು. ಆ ಲೇಖನದ ಮೂಲ ಅಂಶ ಈ ಕೆಳಗಿನಂತಿದೆ. ನಾವು ಯಾವ ಧರ್ಮಕ್ಕೂ ಸೇರಿಲ್ಲ- ಎನ್ನುವವರ ಸಂಖ್ಯೆ ಹೆಚ್ಚಾಗಿತ್ತಿದ್ದು, 'ಧರ್ಮ' ಅಸ್ತಿತ್ವವನ್ನೇ ಕಳೆದುಕೊಳ್ಳುವ ಹಾದಿಯಲ್ಲಿದೆ ಎಂದು ಸೂಚಿಸಿದ್ದಾರೆ.

ಜನಗಣತಿಯಲ್ಲಿ ಸುಮಾರು ಶತಮಾನಕ್ಕೂ ಹೆಚ್ಚು ಕಾಲದಿಂದ ಧರ್ಮದ ವಿವರಗಳನ್ನು ಕಲೆ ಹಾಕುತ್ತಿರುವ ಆಸ್ಟ್ರೇಲಿಯಾ, ಕೆನಡಾ, ಜೆಕ್ ಗಣರಾಜ್ಯ, ಫಿನ್‌ಲ್ಯಾಂಡ್, ಐರ್ಲ್ಯಾಂಡ್, ನೆದರ್‌ಲ್ಯಾಂಡ್, ನ್ಯೂಜಿಲ್ಯಾಂಡ್ ಮತ್ತು ಸ್ವಿಜರ್‌ಲ್ಯಾಂಡ್ ಮುಂತಾದ ರಾಷ್ಟ್ರಗಳಿಂದ ನೂರು ವರ್ಷಗಳ ಮಾಹಿತಿಯನ್ನು ಕಲೆಹಾಕಿ ನೋಡಲಾಗಿ, ಆಧುನಿಕ ಕಾಲದ, ದೊಡ್ಡ ಪ್ರಮಾಣದ ಜಾತ್ಯಾತೀತ ರಾಷ್ಟ್ರಗಳಲ್ಲಿ ನಾವು ಯಾವ ಧರ್ಮಕ್ಕೂ ಸೇರಿದವರಲ್ಲ ಎಂದು ಹೇಳಿಕೊಳ್ಳುತ್ತಿರುವ ಜನರ ಸಂಖ್ಯೆ ಹೆಚ್ಚಾಗುತ್ತಲಿದೆ ಎಂದು ಸೂಚಿಸಿದ್ದಾರೆ. ಇದು ವಾಸ್ತವ. ನೆದರ್‌ಲ್ಯಾಂಡ್‌ನಲ್ಲಿ ಈ ಪ್ರಮಾಣ ಶೇ. ೪೦, ಜೆಕ್ ಗಣರಾಜ್ಯದಲ್ಲಿ ಈ ಪ್ರಮಾಣ ಅತಿ ಹೆಚ್ಚು, ಇಲ್ಲಿ ಶೇ. ೬೦ ರಷ್ಟು ಮಂದಿ ತಾವು ಯಾವುದೇ ಧರ್ಮಕ್ಕೂ ಸೇರಿಲ್ಲ ಎಂದಿದ್ದಾರೆ. ಸಮೀಕ್ಷೆಯ ವರದಿ ಅಂತಿಮವಾಗಿ 'ಈ ಎಲ್ಲ ರಾಷ್ಟ್ರಗಳಲ್ಲಿ 'ಧರ್ಮ' ಎಂಬುದು ವಿನಾಶದ ಅಂಚಿಗೆ ಸಾಗುತ್ತಿದೆ ಎಂಬುದನ್ನೂ ಸೂಚಿಸಿದೆ.

ಈ ಮೇಲಿನ ವರದಿಯ ಹಿನ್ನಲೆ ಮತ್ತು ಈ ಧಾರ್ಮಿಕ ಸಮ್ಮೇಳನದ ವಿಷಯವನ್ನು ಗಂಭೀರವಾಗಿ ಗಮನಿಸಿದರೆ, ಪೂಜ್ಯರು, ತಮ್ಮ ಅನುಭಾವದ ಹಿನ್ನಲೆಯಲ್ಲಿ ಜಗತ್ತಿಗೆ ಧರ್ಮದ ಅಸ್ತಿತ್ವದ ಬಗ್ಗೆ ಎಚ್ಚರಿಸುತ್ತಿರುವಂತೆ ಕಾಣುತ್ತದೆ.

Will Durant- ಇತಿಹಾಸಕಾರ **'ಧರ್ಮವನ್ನು ಮಾನವ ಜೀವನದಿಂದ ಬಹಿಷ್ಕರಿಸಬೇಕು'** ಅವನು ಬರೆದ Story of the Civilisation ನ್ನು ಉದ್ದಕ್ಕೂ ಧರ್ಮ ಪಂಥಗಳು ನಡೆಸಿದ ಆವಾಂತರಗಳ ಬಗ್ಗೆ ಧರ್ಮದ ಹೆಸರಿನಲ್ಲಿ ಮುಸಲ್ಮಾನರು ನಡೆದಿದ್ದ 'ಜೈಹಾದ್', ಕ್ರೈಸ್ತರು ನಡೆಸಿದ ಕ್ರೂಸೇಡ್, ಕ್ರೈಸ್ತ ಪಂಥಗಳ ನಡುವೆ ಯುರೋಪ್ ಗಳಲ್ಲಿ ನಡೆದ ಮೂವತ್ತು ವರ್ಷಗಳ ಯುದ್ಧ (೧೬೧೮-೪೮) ಐರೋಪ್ಯರು ತಮ್ಮ ವಸಾಹತ್ತುವಾದದ ಬೆಂಬಲಕ್ಕಾಗಿ ಜಗತ್ತನ್ನು ಉದ್ಧರಿಸುವುದಾಗಿ ನಡೆಸಿದ 'ಮಿಶನರಿ' ಚಟುವಟಿಕೆಗಳ ಹೆಸರಿನಲ್ಲಿ ದೌರ್ಜನ್ಯ (Fanaticism).

ಇಲ್ಲಿ 'ಧರ್ಮ' ಎಂದಾಗ ಧರ್ಮಪಂಥ ಅಥವಾ ಮತಗಳ ವಿಚಾರ ಗಮನಕ್ಕೆ ಬರುತ್ತವೆ. ಬೇರೆ ಬೇರೆ ಧರ್ಮಗಳ ನಡುವಿನ ಸ್ಪರ್ಧೆಗೆ, ಯುದ್ಧಗಳಿಗೆ, ಈ ಮತಗಳ ನಡುವಣ ಪ್ರಸಾರೋತ್ಸಾಹವೇ ಕಾರಣ. ಆದ್ದರಿಂದ, ಮತಗಳನ್ನು ಪ್ರತಿಬಂಧಿಸಿ, ಒಂದು ಧರ್ಮವನ್ನು ಇಟ್ಟುಕೊಳ್ಳಬೇಕು. ಇದಕ್ಕೆ **'ಮಾನವಧರ್ಮ'** ಎಂದು ಹೆಸರಿಡಬೇಕು.

***ಧರ್ಮದ ಬೆಳವಣಿಗೆಯನ್ನು ಗಮನಿಸುವುದಾದರೆ***

ಪ್ರಚಾರವಿಲ್ಲದೆ, ಮಂದಿ ಮಧ್ಯದಲ್ಲಿ ಕಾಣಿಸಿಕೊಳ್ಳದೆ, ತಮ್ಮ ಪಾಡಿಗೆ ಸಾಧನೆಯಲ್ಲಿ ತೊಡಗಿಸಿಕೊಂಡು ಪಡೆದ ಜ್ಞಾನವನ್ನು ಹಂಚುವಂತಹ ಅನಾಮಿಕ ಬೈರಾಗಿಗಳಾಗಿರುವ ಸಂತರೂ ಇದ್ದಾರೆ.

ಇವರಿಗೆ ನಿರ್ದಿಷ್ಟ ಸ್ಥಳ, ಸಿದ್ಧಾಂತ ಕೆಲವೊಮ್ಮೆ ಹೆಸರೂ ಸಹ ಇರುವುದಿಲ್ಲ.

ಬಹುಶಃ ನಿಯಮ ಮೀರಿ ಸಾಗರದಾಟಿ, ಪಶ್ಚಿಮ ಜಗತ್ತಿಗೆ ಹೋಗಿಬಂದ ವಿವೇಕಾನಂದರಿಂದ ಆಧುನಿಕ ಮನೋಧರ್ಮಕ್ಕೆ ತಕ್ಕಂತೆ ಆಧ್ಯಾತ್ಮವನ್ನು ಕೊಡುವ ಹೊಸ ರೀತಿ ಶುರುವಾಯಿತು. ಪೀಠ, ಪಟ್ಟಾಭಿಷೇಕ, ಜಾತಿ, ವಯಸ್ಸುಗಳನ್ನೆಲ್ಲ ಮೀರಿದ ಆಧುನಿಕ ಗುರುಪರಂಪರೆಗೆ ನಾಂದಿಯಾಯಿತು.

ಭಾರತದ ಆರ್ಥಿಕತೆಯ ಗ್ರಾಫ್ ಏರುತ್ತಾ ಹೋದ ಬೆನ್ನಲ್ಲೇ ಆಧ್ಯಾತ್ಮ ಗುರುಗಳ ಜನಪ್ರಿಯತೆಯ ಗ್ರಾಫ್ ಕೂಡ ಏರತೊಡಗಿದೆ. ಜನರನ್ನು ಆಧ್ಯಾತ್ಮದತ್ತ ಸೆಳೆಯಲು ಆರೋಗ್ಯ ಸುಧಾರಣೆಯ ಸೂತ್ರವೇ ಮುಖ್ಯ ಆಕರ್ಷಣೆ. **'ಯೋಗಾಭ್ಯಾಸ – ದೇಹ ಮತ್ತು ಮನಸ್ಸುಗಳೆರಡಕ್ಕೂ ಒಳ್ಳೆಯದು'** ಅನ್ನುವ ದೃಷ್ಟಿಯಿಂದಲೂ ಯೋಗಕ್ಕೆ ಹೆಚ್ಚಿನ ಮಹತ್ವ ಕೊಡುತ್ತಾರೆ. ಇಂತಹ ಚಿಂತನೆಗಳು ಪಾರ್ಟ್‌ಟೈಂ ಆಧ್ಯಾತ್ಮಿಕರನ್ನು ಆಕರ್ಷಿಸಿದೆ. ಬಾಬಾ ರಾಮ್‌ದೇವ್ ರವರು ಆರೋಗ್ಯ ತತ್ತ್ವಗಳನ್ನು ಜನಪ್ರಿಯಗೊಳಿಸುತ್ತಾ, ಆಯುರ್ವೇದಗಳನ್ನು ಆಧ್ಯಾತ್ಮಿಕ ಜಗತ್ತಿಗೆ ಬಾಗಿಲುಗಳನ್ನಾಗಿ ಮಾಡಿಕೊಂಡಿದ್ದಾರೆ.

ಹೊಸ ಯುಗದ ಗುರುಗಳ ಸಿದ್ಧಾಂತಕ್ಕೆ ಧರ್ಮಗಳ ಚೌಕಟ್ಟು ಇರಲೇಬೇಕೆಂದಿಲ್ಲ. ಇವರ ಮೂಲ ಆಶಯ ತಾರತಮ್ಯ ರಹಿತ, ಕಲ್ಮಷ ರಹಿತ, ಹೀಗೆ ಯುಗಕ್ಕೆ ತಕ್ಕಂತೆ ಆಧ್ಯಾತ್ಮದ ಪರಿಭಾಷೆಯಲ್ಲಿ ಹೊಸ ಅನ್ವೇಷಣೆಗಳು ಸಾಗಿವೆ.

ಆಧುನಿಕ ಗುರುಗಳ ಯಶಸ್ಸಿನ ಮತ್ತೊಂದು ಸೂತ್ರ ಮಡಿವಂತಿಕೆ ಮತ್ತು ಆಚರಣೆಗಳಿಂದ ಹೊರಬಂದು ಜನರನ್ನು ಆಕರ್ಷಿಸುವ ಎಲ್ಲ ದಾರಿಗಳಲ್ಲೂ ಸಾಗುವುದು. ಆದುದರಿಂದ, ಓಶೋ ರಜನೀಶ್‌ರವರಾಗಲಿ, ಆರ್ಟ್ ಆಫ್ ಲಿವಿಂಗ್‌ನ ಶ್ರೀ ರವಿಶಂಕರ್ ಗುರೂಜಿಯಾಗಲಿ, ಯೋಗಗುರು ಬಾಬಾ ರಾಮದೇವ್ ಆಗಲಿ ಇಂತಹ ಅನೇಕ ಮಾಡ್ರನ್ ಗುರುಗಳ ಆಶ್ರಮದಲ್ಲಿ ನಿರ್ದಿಷ್ಟ ಜಾತಿಗೆ ಮಾತ್ರ ಪ್ರವೇಶ ಎನ್ನುವ ಅಂಕಿತಗಳು ಕಾಣುವುದಿಲ್ಲ. ಪುಸ್ತಕ ಪ್ರಕಾಶನ, ಅನಿಮೇಷನ್, ರೆಸಾರ್ಟ್ ಮಾದರಿಯ ಆಶ್ರಮ ವಸತಿಗಳು ರುಚಿಕಟ್ಟಾದ ಫುಡ್‌ಕಲ್ಚರ್, ಇಸ್ಕಾನ್‌ನಂತಹ ಸಂಸ್ಥೆಗಳು ಸಮರ್ಥವಾಗಿ ಬಳಸಿಕೊಳ್ಳುತ್ತಿವೆ.

ವಿಷಯದ ಮೂಲಕ್ಕೆ ಬಸವತತ್ತ್ವಗಳ ಅನ್ವಯಿಕ ಚಿಂತಕನಾಗಿ ಬಸವಣ್ಣನವರ ಪ್ರಸಿದ್ಧ ವಚನಗಳೆರಡನ್ನು ಗಮನಿಸಿದರೆ, ಇಂದಿನ ಅಸ್ತಿತ್ವವನ್ನು ಕಳೆದುಕೊಳ್ಳುತ್ತಿರುವ ಧರ್ಮಕ್ಕೆ ಶರಣರ ಸಮಗ್ರ ಚಿಂತನೆ ಮುನ್ನುಡಿ ಬರೆದಂತಿದೆ.

*ಇವನಾರವ ಇವನಾರವ, ಇವನಾರವ ಎಂದೆನಿಸದಿರಯ್ಯ.*
*ಇವನಮ್ಮವ ಇವನಮ್ಮವ, ಇವನಮ್ಮವ*
*ಇವ ನಿಮ್ಮ ಮನೆಯ ಮಗನೆಂದೆನಿಸಯ್ಯ ಕೂಡಲಸಂಗಮದೇವ.*

ಇಂತಹ ಬಸವಣ್ಣನವರ ಅದ್ಭುತ ತತ್ವವಿದ್ದಾಗ್ಯೂ ಧರ್ಮಗಳು ಮತಗಳಾಗಿ ತಮಗರಿವಿಲ್ಲದಂತೆ ಪರಿವರ್ತನೆಗೊಳ್ಳುತ್ತಿರುವುದು ಮಾಯೆಯ ಪ್ರಭಾವ ದುರಂತ.

ಉದಾ :

* ಸಮಾಜ ಸೇವೆಯ ಸೋಗಿನಲ್ಲಿ ಧರ್ಮಾಂತರ ಪ್ರಯತ್ನಗಳು ಧ್ವನಿ ಎತ್ತಿರುವುದನ್ನು ನಾವು ಗಮನಿಸಿದ್ದೇವೆ.
* ಧರ್ಮದ ಹೆಸರಿನಲ್ಲಿ ಧರ್ಮಾಂಧತೆಯನ್ನು ಪೋಷಿಸುತ್ತಿರುವ ವ್ಯವಸ್ಥೆಯನ್ನು ಗಮನಿಸಿದ್ದೇವೆ.
* ಸಮಾಜದ ಮೂಢಭಕ್ತಿಯನ್ನು ಆರ್ಥಿಕ ಕೇಂದ್ರಗಳನ್ನಾಗಿಸಿ ಕೊಂಡ ದೇವಾಲಯ ಸಂಸ್ಕೃತಿಯ ಬೆಳವಣಿಗೆಯನ್ನು ಗಮನಿಸಿದ್ದೇವೆ.
* ಭ್ರಷ್ಟ ಮತ್ತು ದುಷ್ಟಶಕ್ತಿಗಳನ್ನು ಗೌರವಿಸುವ ಮತ್ತು ಪೋಷಿಸುವ ಮಠ ಸಂಸ್ಕೃತಿಯನ್ನೂ ಕಾಣುತ್ತೇವೆ.

ವಾಸ್ತವದ ಹಿನ್ನಲೆಯಲ್ಲಿ ಇತರ ಧರ್ಮಗಳ ಬಗ್ಗೆ ಗೌರವ ಸಮಾಜದಲ್ಲಿ ಬೆಳೆಯಬೇಕಾದರೆ ಸತ್ಯ, ನ್ಯಾಯ, ನಿಷ್ಪಕ್ಷಪಾತ ಧರ್ಮರಾಜ್ಯದ ಸ್ಥಾಪನೆಯಾಗಬೇಕೇ ಹೊರತು, ಮತಗಳ ರಾಜ್ಯಗಳದ್ದಲ್ಲ. ರಾಜಕೀಯದ ಹಿನ್ನಲೆಯ ಶಾಸನಗಳು ನೈಜ ಮಾನವ ಧರ್ಮದ ಶಾಸನಗಳಾಗಿ ಅಂಕುರಿಸಬೇಕು. ಕೇವಲ ಸಂವಿಧಾನದ ಬದ್ಧತೆಗೆ ಸೀಮಿತಗೊಂಡ ನ್ಯಾಯಾಲಯಗಳು ಧರ್ಮಾಲಯಗಳಾಗಿ ಪರಿವರ್ತನೆಗೊಳ್ಳಬೇಕಾಗುತ್ತದೆ.

* ಅನೈತಿಕ ಬದುಕನ್ನು ಸಾಗುತ್ತಿರುವ ದುಷ್ಟ ಶಕ್ತಿಗಳನ್ನು ಸಮಾಜದಲ್ಲಿ ಬಹಿಷ್ಕಾರ ಮಾಡಿ ಅಸ್ಪೃಶ್ಯರನ್ನಾಗಿಸಿ ಸಾತ್ವಿಕ ಜನ ಸಮುದಾಯಕ್ಕೆ ಧಾರೆಯೆರಯಬೇಕು.
* ವಿಶ್ವಕ್ಕೆ ಸಿದ್ಧಾಂತವಾಗಿರುವ **'ದಯೆಯೇ ಧರ್ಮದ ಮೂಲ'** ಈಗ **'ಭಯವೇ ಧರ್ಮದ ಮೂಲ'**ವಾಗಿದೆ. ಧರ್ಮದ ಹೆಸರಿನಲ್ಲಿ ರಾಜಕೀಯ ಮತ್ತು ಸಾಮಾಜಿಕ ಸ್ಥಾನಮಾನ ಗಳನ್ನು ದೊರಕಿಸಿಕೊಳ್ಳುವ ಹುನ್ನಾರದ ಹಿನ್ನಲೆಯಲ್ಲಿ ಹತ್ತು ಹಲವು ರೀತಿಯ ಯಜ್ಞಯಾಗಗಳನ್ನು ರಾಜಕಾರಣಿಗಳಿಂದ ಪುರೋಹಿತರು ಮಾಡಿಸುತ್ತಲೇ ಇದ್ದಾರೆ.
* ಕೆಲವು ಹಬ್ಬ, ಹುಣ್ಣಿಮೆ, ರಥೋತ್ಸವಗಳಲ್ಲಿ ಲೆಕ್ಕವಿಲ್ಲದಷ್ಟು ಅಮಾಯಕ ಪ್ರಾಣಿಗಳ ಸಾಲು ಸಾಲಾಗಿ ಮಾರಣಹೋಮ ಮಾಡುವ ದೃಶ್ಯಗಳನ್ನು ಇಂದಿಗೂ ಕಾಣುತ್ತಿದ್ದೇವೆ. ಅದನ್ನು ಪ್ರತಿಭಟಿಸುವ, ಖಂಡಿಸುವ ಸಾಹಸವನ್ನು ಮಾತ್ರ ಮಾಡುವುದಿಲ್ಲ. ಬದಲಾಗಿ, ತಮ್ಮ ವಿವಿಧ ದೃಶ್ಯಮಾಧ್ಯಮಗಳು ಅವುಗಳನ್ನು ವೈಭವೀಕರಿಸಿ ಎಲ್ಲ ಜನರೂ ಅಂತಹ ಹಿಂಸೆ, ಅನಾಚಾರಗಳನ್ನು ಸಹಜ ಎನ್ನುವ ರೀತಿಯಲ್ಲಿ





ಪ್ರತಿಪಾದಿಸುತ್ತಿವೆ. ಅಹಿಂಸಾ ತತ್ವಗಳನ್ನು ಎತ್ತಿ ಹಿಡಿಯಲೆಂದೇ ಪ್ರಾಣಿದಯಾ ಸಂಘಗಳು, ಅಸ್ತಿತ್ವಕ್ಕೆ ಬಂದಿವೆಯಾದರೂ, ಧಾರ್ಮಿಕ ಹಿನ್ನಲೆಯಲ್ಲಿ ಗೋಹತ್ಯೆಯ ನಿಷೇಧಕ್ಕೆ ಒತ್ತು ಕೊಟ್ಟಂತೆ ಇತರ ಪ್ರಾಣಿಗಳ ಹತ್ಯೆಯ ಬಗ್ಗೆ ಚಿಂತನೆ ಮಾಡದೆ ಮೂಕಪ್ರೇಕ್ಷಕರಾಗುತ್ತಾರೆ. ಅದಕ್ಕಾಗಿಯೇ, ಅಂತಹ ದೇವರು, ಶಾಸ್ತ್ರ, ವೇದದ ನೆಪದಲ್ಲಿ ದಯೆಯನ್ನು ಮರೆ ಮಾಡಿ ಭಯವನ್ನೇ ನಿಜವಾದ ಧರ್ಮವೆಂಬಂತೆ ಧಾರ್ಮಿಕ ಭಯೋತ್ಪಾದನೆಯನ್ನು ಮೂಢನಂಬಿಕೆಗಳ ಮೂಲಕ ಹರಡುತ್ತಿದ್ದಾರೆ. ಇಂತಹವರಿಗೆ, ಬಸವಣ್ಣನವರು ಈ ಕೆಳಗಿನಂತೆ ಸೂಚಿಸುತ್ತಾರೆ.

*ಮಾತಿನ ಮಾತಿಂಗೆ ನಿನ್ನ ಕೊಂದಹರೆಂದು*
*ಎಲೆ ಹೋತೇ ಅಳು, ಕಂಡಾ !*
*ವೇದವನೋದಿದವರ ಮುಂದು ಅಳು, ಕಂಡಾ !*
*ಶಾಸ್ತ್ರವನೋದಿದವರ ಮುಂದು ಅಳು, ಕಂಡಾ !*
*ನೀನತ್ತುದಕ್ಕೆ ತಕ್ಕುದ ಮಾಡುವ ಕೂಡಲಸಂಗಮದೇವ.*

* ನಿಜವಾದ ಧರ್ಮದ ಗುರಿ ಹಿಂಸೆಯನ್ನು ಮೆಟ್ಟಿ ನಿಲ್ಲುವುದು. ಸಾತ್ವಿಕ ಬದುಕಿಗೆ ದಾರಿ ಮಾಡಿಕೊಡುವುದು. ಮನುಷ್ಯ ಧರ್ಮ ದಾರಿಯಲ್ಲಿ ನಡೆದಾಗ ಅವನ ದುಃಖ ದುಮ್ಮಾನಗಳು ಅಡಗಿ, ನೆಮ್ಮದಿ, ಸಂತೋಷ ಸುಖ ಪ್ರಾಪ್ತವಾಗಬೇಕು.
* ಇವತ್ತು ಮನುಷ್ಯ ತನ್ನ ನಾಲಿಗೆ ಚಪಲಕ್ಕಾಗಿ ತಿನ್ನಬಾರದನ್ನು ತಿಂದು, ಕುಡಿಯಬಾರದನ್ನು ಕುಡಿದು, ಮಾಡಬಾರದನ್ನು ಮಾಡಿ, ನಾಯಿ ನರಿಗಳ ಹಾಗೆ ಬದುಕಿ, ಹಂದಿ ಹದ್ದುಗಳ ಹಾಗೆ ಬದುಕಿ, ಸಗಣಿಯ ಹುಳದಂತೆ ಸತ್ತು ಹೋಗುವುದನ್ನು ಹಲವೆಡೆ ಕಾಣುತ್ತಿದ್ದೇವೆ. ಅಂಥವರಿಗೆ ಬಸವಣ್ಣನವರು ಹೇಳುತ್ತಾರೆ.

*ಅಂಗದಿಚ್ಛೆಗೆ ಮಧ್ಯಮಾಂಸವ ತಿಂಬರು,*
*ಕಂಗಳಿಚ್ಛೆಗೆ ಪರವಧುವನೆರೆವರು,*
*ಲಿಂಗಲಾಂಛನದಾರಿಯಲ್ಲಿ ಫಲವೇನು ?*
*ಕುರ್ಳದಲ್ಲಿ ಲಿಂಗವ ಪೂಜಿಸಿ*
*ಅಲ್ಲದಾಟವನಾಡಬಾರದು*
*ಹೃದಯದಲ್ಲಿ ಕತ್ತರಿ ತುದಿನಾಲಿಗೆಯಲ್ಲಿ ಬೆಲ್ಲ.*
*ಲೋಕೋಪಚಾರಕ್ಕೆ ಮಜ್ಜನಕ್ಕೆರೆವರಯ್ಯ*
*ಕೂಡಲಸಂಗಮದೇವರನೊಲಿಸಲು ಬಂದ*
*ಪ್ರಸಾದಕಾಯವಿದು ವೃಥಾಕೆಡಿಸಲಾಗದು.*

* ಇಂತಹ ವಾಸ್ತವದ ಹಿನ್ನಲೆಯಲ್ಲಿ ಮತ್ತೆ ಬಸವಣ್ಣನವರು

*ಒಲೆ ಹತ್ತಿ ಉರಿದಡೆ ನಿಲಬಹುದಲ್ಲದೆ,*
*ಧರೆ ಹತ್ತಿ ಉರಿದಡೆ ನಿಲಲುಬಾರದು,*
*ಏರಿ ನೀರುಂಬಡೆ ಬೇಲಿ ಕೆಯ್ಯ ಮೇವಡೆ,*
*ನಾರಿ ತನ್ನ ಮನೆಯಲ್ಲಿ ಕಳುವಡೆ*
*ತಾಯ ಮೊಲೆಹಾಲು ನಂಜಾಗಿ ಕೊಲುವಡೆ*
*ಇನ್ನಾರಿಗೆ ದೂರುವೆ ಕೂಡಲಸಂಗಮದೇವಾ*

ಆದುದರಿಂದ, ಈ ಧರ್ಮ ಸಮ್ಮೇಳನ ಕೆಲವು ನಿರ್ದಿಷ್ಟವಾದ ನಿರ್ಣಯಗಳನ್ನು ಕೈಕೊಳ್ಳಬೇಕಾಗುತ್ತದೆ.

ಚರ್ಚ್, ಮಸೀದಿ, ದೇವಾಲಯಗಳು, ಮಠಗಳು, ಅನುಭವ ಮಂಟಪಗಳಾಗಬೇಕು. ಧರ್ಮಾಂತರ, ಧರ್ಮಾಂಧತೆ, ಧರ್ಮದ್ರೋಹ ಧರ್ಮಗಳು ಸಂರಕ್ಷಿಸುವ ಪೂಜ್ಯರಿಂದ ಗಂಭೀರ ಚಿಂತನೆಗೊಳಬಾಗಬೇಕು. ಬೈಬಲ್, ಕುರಾನ್, ವೇದ, ಉಪನಿಷತ್ತುಗಳು ಮತ್ತು ವಚನ ಧರ್ಮಸಾರ ಬಸವಣ್ಣನವರು ಹೇಳುವಂತೆ ಕೂಡಲಸಂಗನ(ಅಖಂಡ ಚೈತನ್ಯದ) ಧರ್ಮಕ್ಕೆ ನಾಂದಿ ಹಾಡಬೇಕು.

*'ನಿಮ್ಮ ಶರಣರು ಕಾಯ ಹಿಡಿದಿರ್ದು ನಿರ್ಮಾಯರಾಗಿಪ್ಪುದ ಹೇಳಯ್ಯ*
*ನಿಮ್ಮ ಧರ್ಮ, ನಿಮ್ಮ ಧರ್ಮ'*
*'ಕೂಡಲಸಂಗಮದೇವ ನಿಮ್ಮ ಚರಣಕಮಲದಲ್ಲಿ*
*ಭ್ರಮರನ್ನಾಗಿರಿಸು, ನಿಮ್ಮ ಧರ್ಮ'*
*ಹಾಲು ಅಲ್ಲದ್ದು, ನೀರು ಅಲ್ಲದ್ದು, ನಿಮ್ಮ ಧಮನಿ*
*'ಎನ್ನೊಡೆಯ ಕೂಡಲಸಂಗಮದೇವ ನಿಮ್ಮ ಚರಣವ*
*ನೆನೆಯುವಂತೆ ಕರುಣಿಸು',*
*'ಸೆರಗೊಡ್ಡಿ ಬೇಡುವ ನಿಮ್ಮ ಧರ್ಮ'*
*'ನಾಯಿತನವ ಮಾಣಿಸು ಕೂಡಲಸಂಗಮದೇವ ನಿಮ್ಮ ಧರ್ಮ'*

ಆಧ್ಯಾತ್ಮದ ಬುನಾದಿಯಲ್ಲಿ ಸ್ವಾಮಿ ವಿವೇಕಾನಂದರು ತಿಳಿಸಿರುವಂತೆ 'ಆಧ್ಯಾತ್ಮಿಕ ಆದರ್ಶದಷ್ಟು ಮತ್ತಾವುದೂ ನಮಗೆ ಅಷ್ಟೊಂದು ಶಕ್ತಿಯನ್ನು ಧಾರೆಯೆರೆಯಲಾರದು. ಈ ಹೇಳಿಕೆಯ ಸತ್ಯವನ್ನು ಇತಿಹಾಸವು ನಮಗೆ ಮನವರಿಕೆ ಮಾಡಿಕೊಡುತ್ತದೆ. ಆ ಶಕ್ತಿ ನಷ್ಟವಾಗಿಲ್ಲ. ವಿಶ್ವ ಚಾಲಕರು, ಜನರನ್ನು ಆಕರ್ಷಿಸುವ ಮಹಾಶಕ್ತಿ ಪ್ರವಾಹವನ್ನು ಪ್ರಪಂಚಕ್ಕೆ ತರುವವರು. ಇಂಥವರಿಗೆ ಯಾವಾಗಲೂ ಆಧ್ಯಾತ್ಮಿಕತೆಯ ಹಿನ್ನಲೆಯಾಗಿರುವುದನ್ನು ನಾವು ನೋಡಬಹುದು.

ಈ ಅಂಶವನ್ನೇ ಕುವೆಂಪುರವರು ಬಸವಣ್ಣನವರಲ್ಲಿ ಗುರುತಿಸುತ್ತಾ,

*ಕಾರ್ತಿಕ ಕತ್ತಲೆಯಲ್ಲಿ ಆಕಾಶ ದೀಪವಾಗಿ ನೀಬಂದೆ,*
*ಬಟ್ಟೆಗೆಟ್ಟವರಿಗೊಂದು ದೊಂದಿ ದಿಕ್ಕಾಗಿ*
*ಎಂಟು ಶತಮಾನಗಳ ಹಿಂದೆ,*
*ಅಗ್ನಿ ಖಡ್ಗವನಾಂತ ಓ ಆಧ್ಯಾತ್ಮ ಕ್ರಾಂತಿವೀರ,*
*ದೇವದಯೆಯೊಂದು ಹೇ ಧೀರಾವತಾರ,*
*ಶ್ರೀ ಬಸವೇಶ್ವರಾ....... ನಿನಗೆ ನಮೋ ನಮೋ*

ರಾಜಕೀಯದ ಕೇಂದ್ರವಾಗಿರುವ ಸಂಸತ್ ಭವನ ನಿರ್ಮಾಣವಾಗಿರುವಂತೆ, **'ವಿಶ್ವ ಶರಣ ಸಂಕುಲ'** ಎಂಬ ಅಭಿದಾನದಡೆಯಲ್ಲಿ ಆಧ್ಯಾತ್ಮಿಕ ಬುನಾದಿಯ **'ಭಾರತದ ಅನುಭವ ಮಂಟಪ'** ನಿರ್ಮಾಣವಾಗಬೇಕು. ಅನುಭವ ಮಂಟಪದಲ್ಲಿ ಬದುಕಿನ ನೈಜ ಚಿಂತನೆಗಳನ್ನು ಚರ್ಚಿಸಿ, ಎಲ್ಲ ಧರ್ಮದ ಹಿರಿಯರು ಒಟ್ಟಾರೆಯಾಗಿ ವ್ಯಷ್ಟಿ ಪ್ರಜ್ಞೆಯನ್ನು ಮರೆತು ಬಸವಣ್ಣನವರು ಹೇಳುವಂತೆ, **'ಸೋಹಂ ಎಂದೆನಿಸದೆ, ದಾಸೋಹಂವೆಂದೆನಿಸಯ್ಯಾ'** ಎಂಬಂತೆ ಭಾರತದ ಸಮಷ್ಟಿ ಪ್ರಜ್ಞೆಯ ಚಿಂತನವಾಗಬೇಕು. ಹೊರ ರಾಷ್ಟ್ರಗಳ ಧರ್ಮ ಚಿಂತನೆಗಳು ಭಾರತದ ಧರ್ಮ ಚಿಂತನೆಗಳಾಗಬಾರದು. ಅಂತಿಮವಾಗಿ, ಡಾ|| ಅಬ್ದುಲ್ ಕಲಾಂರವರು ಹೇಳುವಂತೆ, ಭಾರತದ ಪ್ರತಿಯೊಬ್ಬ ಪ್ರಜೆಯು ಇಡೀ ವಿಶ್ವದ ವಿಶಾಲತೆಯನ್ನಳವಡಿಸಿಕೊಂಡು ರಾಷ್ಟ್ರಧರ್ಮೀಯರಾಗಿ ಬದುಕಬೇಕು.

## ಸ್ವಧರ್ಮದಲ್ಲಿ ಶ್ರದ್ಧೆ

ಸ್ವಧರ್ಮ ಎಂದಾಗ ಬಸವಣ್ಣನವರು ಹೇಳುವಂತೆ 'ಎನ್ನ ಚಿಂತೆ ಎನಗಲ್ಲದೆ, ಪರಚಿಂತೆ ಎನಗೇಕಯ್ಯ' ಈ ಸೂತ್ರಧಾರದ ಮೇಲೆ ಲಿಂಗವಂತನಾದವನು ವೈಯಕ್ತಿಕವಾಗಿ, ಲಿಂಗನಿಷ್ಠೆಯಲ್ಲಿ ಮುಕ್ತಿಯನ್ನು ಪಡೆಯಬೇಕೇ ಹೊರತು ಪರಧರ್ಮಗಳ ಪಥಗಳ ಮೇಲೆ ಇದಿರು ಹಳಿಯಲುಬಾರದು.

ಸ್ವಧರ್ಮ ನಿಷ್ಠೆಗೆ ಬಸವ ಸಮಿತಿಯ ಸಂಸ್ಥಾಪಕ ಅಧ್ಯಕ್ಷರಾದ ಡಾ|| ಬಿ.ಡಿ. ಜತ್ತಿಯವರನ್ನು ಸ್ಮರಿಸಿಕೊಳ್ಳುತ್ತಾ, ಒಂದು ಸಂದರ್ಭವನ್ನು ಇಲ್ಲಿ ಉಲ್ಲೇಖಿಸಬಯಸುತ್ತೇನೆ. ಅಂದು, ರಾಷ್ಟ್ರಪತಿಗಳಾಗಿದ್ದ ಜತ್ತಿಯವರು ರಾಷ್ಟ್ರಪತಿಗಳಾಗಿ (ಹಂಗಾಮಿ) ಪ್ರಮಾಣ ವಚನ ಸ್ವೀಕರಿಸಬೇಕಾದ ಸಂದರ್ಭ, ಉಪರಾಷ್ಟ್ರಪತಿ ಭವನದಲ್ಲಿ ಸಕಲ ಆದರಗಳೊಂದಿಗೆ ಉಪರಾಷ್ಟ್ರಪತಿಗಳನ್ನು, ರಾಷ್ಟ್ರಪತಿಗಳ ಪ್ರಮಾಣ ವಚನಕ್ಕೆ ಕರೆದೊಯ್ಯುವ ವೈಭವದ ಸಿದ್ಧತೆ, ಜತ್ತಿಯವರು ಎಂದಿನಂತೆ, ತಮ್ಮ ಸುಪ್ರಭಾತದ ನಿಯಮಗಳನ್ನು ಪೂರೈಸುತ್ತಾ, ತಮ್ಮ ಪೂಜಾಕೊಠಡಿಯಲ್ಲಿ ನಿಷ್ಠೆಯಿಂದ ಇಷ್ಟಲಿಂಗ ಪೂಜೆಯನ್ನು ಮಾಡಿಕೊಂಡು ಅತ್ಯಂತ ಸಹಜವಾಗಿ ಸರಳತೆಯ ಉಡುಪನ್ನು ಧರಿಸಿ ರಾಷ್ಟ್ರಪತಿ ಭವನಕ್ಕೆ ಆಗಮಿಸಿದರು. ಪ್ರಮಾಣ ವಚನವಾದ ನಂತರ ಪತ್ರಕರ್ತರೊಬ್ಬರು ಅವರನ್ನು ಸಂದರ್ಶಿಸುತ್ತಾ, ಕರ್ನಾಟಕದಲ್ಲಿರುವ ಒಂದು ಸಣ್ಣ ಮತದ ಸಂಕೇತವಾದ ವಿಭೂತಿಯನ್ನು ಧರಿಸಿಕೊಂಡು ಜಾತ್ಯಾತೀಯ ಮಹಾನ್ ರಾಷ್ಟ್ರದ ರಾಷ್ಟ್ರಪತಿಗಳಾಗಿರುವಾಗ ತಮಗೆ ಸೂಕ್ತವೇ? ಎಂಬ ಪ್ರಶ್ನೆ, ಜತ್ತಿಯವರು ಆಗಷ್ಟೆ, ಇಷ್ಟಲಿಂಗ ಪೂಜೆ ಮುಗಿಸಿಕೊಂಡು ಬಂದ ಸಂದರ್ಭದಲ್ಲಿ ಉತ್ತರಿಸುತ್ತಾ, 'ವಿಭೂತಿಯನ್ನು ನಾನು ಬಿ.ಡಿ. ಜತ್ತಿ ಎಂಬ ವ್ಯಕ್ತಿಯ ಹಣೆಗೆ ಧರಿಸುತ್ತಿಲ್ಲ ಅಥವಾ ರಾಷ್ಟ್ರಪತಿಯ ಸ್ಥಾನಕ್ಕೂ ಸಹ ಧರಿಸುತ್ತಿಲ್ಲ. ವಿಭೂತಿ ನನ್ನ ಅಂತರಂಗದಲ್ಲಿರುವ ಶಿವನಿಗೆ ಧರಿಸುತ್ತಿದ್ದೇನೆ. ಈ ವಿಭೂತಿ ಧಾರಣೆ ರಾಷ್ಟ್ರಪತಿಯ ಸ್ಥಾನಕ್ಕೆ ಕಳಂಕ ತರುವುದಾದರೆ, ರಾಷ್ಟ್ರಪತಿಯ ಸ್ಥಾನವನ್ನು ಬಿಟ್ಟೇನೂ ಹೊರತಾಗಿ ವಿಭೂತಿಯನ್ನು ಬಿಡುವುದಿಲ್ಲ' ಈ ಸಂದರ್ಭವನ್ನು ಗಮನಿಸಿದರೆ ಬಹುಶಃ ಅವರಿಗೆ ಬಸವಾದಿ ಶರಣರು ಮಾರ್ಗದರ್ಶಿಸಿರುವ ಪ್ರಾಣಲಿಂಗ ಯೋಗದ ಬಗ್ಗೆ ಅವರ ನಿಷ್ಠೆಯನ್ನು ಸೂಚಿಸುತ್ತದೆ. ಯಾವುದೇ ಒಂದು ಪಥವನ್ನು ನಮ್ಮ ಬದುಕಿನಲ್ಲಿ ಘನೀಕರಿಸಿಕೊಂಡಾಗ ಕೇವಲ ಆ ಸಿದ್ಧಾಂತ ನಮ್ಮ ಬದುಕಿನ ಅನ್ವೇಷಣೆ ಆಗಬೇಕೇ ಹೊರತು, ನೀರಕಂಡಲ್ಲಿ ಮುಳುಗುವಂತಾಗಬಾರದು. ಕಾರಣ, ಒಂದು ಸಿದ್ಧಾಂತದ ಮೇಲೆ ಬಸವಣ್ಣನವರು ಹೇಳುವಂತೆ, **'ಶರಣೆಂಬುದು ನಂಬುದು'** ಎಂಬ ಪರಿಪೂರ್ಣ ನಿಷ್ಠೆ ಇರಬೇಕಾಗುತ್ತದೆ. ಹೀಗಾಗಿ, ಇತರ ಧರ್ಮಗಳ ವಗ್ಗೆ ಸಂಪೂರ್ಣ ಗೌರವವನ್ನು ಇಟ್ಟುಕೊಂಡು ಸ್ವಧರ್ಮದಲ್ಲಿ ನಿಷ್ಠೆ ಇರಿಸಿಕೊಂಡು ಬದುಕಿದರೆ, ಧರ್ಮ ಯಾವ ಕಾರಣಕ್ಕೂ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವುದಿಲ್ಲ. ಬಸವಣ್ಣನವರು ಎಲ್ಲ ಸಂದರ್ಭಗಳನ್ನು ವಾಸ್ತವತೆಯಿಂದ ಗಮನಿಸಿ, ಸೂಕ್ತವಾದ ಬದಲಾವಣೆಗಳನ್ನು ಮಾಡಿರುವುದನ್ನು ಗಮನಿಸಿದರೆ, ಕೂಡಲಸಂಗಮನ ಧರ್ಮದ ಅನುಯಾಯಿಗಳಾಗಿ ಧರ್ಮನಿಷ್ಠೆಯನ್ನಿಟ್ಟುಕೊಂಡು ಮುನ್ನಡೆಯುವ ಪ್ರಯತ್ನ ಮಾಡೋಣ.

ಜತ್ತಿಯವರು ತಮ್ಮ ೯೧ನೆಯ ವಯಸ್ಸಿನಲ್ಲಿ ಬೆಂಗಳೂರಿನ ಜೈನ್ ಆಸ್ಪತ್ರೆಯಲ್ಲಿ ಪ್ರಜ್ಞಾಹೀನ ಸ್ಥಿತಿಯಲ್ಲಿದ್ದಾಗ, ಬೇಲಿಮಠದ ಪೂಜ್ಯರಾದ ಶ್ರೀ ಶ್ರೀ ಶಿವರುದ್ರಮಹಾಸ್ವಾಮಿಗಳವರು ಆಸ್ಪತ್ರೆಗೆ ಬಂದು ಜತ್ತಿಯವರ ಆರೋಗ್ಯದ ಬಗ್ಗೆ ವಿಚಾರಿಸಿದರು. ಅವರು ಪ್ರಜ್ಞಾಹೀನ ಸ್ಥಿತಿಯಲ್ಲಿರುವ ವಾಸ್ತವತೆಯನ್ನು ಅವರಿಗೆ ತಿಳಿಸಲಾಗಿ, ವಿಭೂತಿ ಇದೆಯಾ ಎಂದು ನನ್ನನ್ನು ಕೇಳಿದರು. ಆಗ ನಾನು ಆಸ್ಪತ್ರೆಯಲ್ಲಿ ವಿಭೂತಿ? ಉದ್ಗಾರವೆತ್ತಿದೆ. ಆಗ ಅವರು ತಮ್ಮ ವಾಹನದಲ್ಲಿದ್ದ ವಿಭೂತಿಯನ್ನು ತರಿಸಿ ಜತ್ತಿಯವರ ಹಣೆಗೆ ಪೋಷಿಸಿದರು. ಕಿನೆಯ ಬಾರಿಗೆ ವಿಭೂತಿಯನ್ನು ಪೋಷಿಸುವ ಸಂದರ್ಭದಲ್ಲಿ ಜತ್ತಿಯವರು ತಮ್ಮ ಕೊನೆಯ ಉಸಿರನ್ನು ಎಳೆದ ಈ ಸನ್ನಿವೇಶ ಜತ್ತಿಯವರಿಗೆ ಸ್ವಧರ್ಮದಲ್ಲಿದ್ದ ನಿಷ್ಠೆಯನ್ನು ತಮ್ಮ ಕೊನೆಯ ಉಸಿರಿನಲ್ಲಿಯೂ ಸಹ ಸಾಕ್ಷೀಕರಿಸಿದಂತಿತ್ತು ಎಂಬ ಸತ್ಯ ಸಂಗತಿ ಸಮಾಜಕ್ಕೆ ಹಿಡಿದ ಕನ್ನಡಿಯಾಗಿದೆ. ಅವರ ಜೀವನದ ಅಂತಿಮ ದರ್ಶನ ವೈಯಕ್ತಿಕವಾಗಿ ನನ್ನ ಅಂತರಂಗದ ಬಸವನಿಷ್ಠೆಯನ್ನು ಜಾಗೃತಗೊಳಿಸಿತು. ❑





# ಸ್ವಧರ್ಮದಲ್ಲಿ ಶ್ರದ್ಧೆ- ಇತರ ಧರ್ಮಗಳ ಬಗ್ಗೆ ಗೌರವ
# ಧರ್ಮಗಳನ್ನು ಗೌರವಿಸುವುದು ಒಂದು ಧಾರ್ಮಿಕ ಕಲೆ

- **ರೆವರೆಂಡ್ ಡಾ|| ಡಿ. ಮನೋಹರ್ ಚಂದ್ರಪ್ರಸಾದ್**
ಪ್ರೆಸ್‌ಬೈಟರ್, ಸಿ.ಎಸ್.ಐ., ಬೆಂಗಳೂರು

ವಿವಿಧ ಧರ್ಮಗಳನ್ನು ಮತ್ತು ಇತರರ ಜೀವನ ಕ್ರಮಗಳನ್ನು ಗೌರವಿಸುವುದು ಒಂದು ಮುಕ್ತ ಮತ್ತು ಆದರ್ಶ ಜೀವನಕ್ರಮ. ಪ್ರಪಂಚದ ಯಾವುದೇ ಮಾನವಧರ್ಮದ ಅನುಸರಣೆ ಎಂದರೆ ತರ್ಕಬದ್ಧವಾಗಿ ಆಚರಿಸುವ ಬಹುಮುಖಿ ಧರ್ಮಗಳ ವಾಸ್ತವ್ಯಗಳನ್ನು ಶ್ರದ್ಧೆಯಿಂದ ಗ್ರಹಿಸುವ ವಿಧಾನವಾಗಿದೆ. ಈ ಬಹುಮುಖಿ ಧರ್ಮ ಮತ್ತು ಸೈದ್ಧಾಂತಿಕ ವಸ್ತುಸ್ಥಿತಿಗಳಲ್ಲಿ ಏಕೈಕ ಸತ್ವವಾದ ಪರಮಾತ್ಮನನ್ನು ಅರಿಯಲು ಸರ್ವರೂ ಪ್ರಾಮಾಣಿಕವಾಗಿ ಶ್ರಮಿಸಬೇಕೇ ವಿನಃ ಈ ಏಕೈಕ ಸತ್ವದ ಅನ್ವೇಷಣೆಗಾಗಿ ಬಳಸುವ ವಿವಿಧ ದೃಷ್ಟಿಕೋನಗಳನ್ನು ಅವುಗಳ ಕ್ಷೇತ್ರ ಮತ್ತು ಪರಿಧಿಗಳನ್ನು ಎಂದಿಗೂ ಕಡೆಗಾಣಿಸಬಾರದು.

ಬಹುಧರ್ಮೀಯವಾದ ಅಥವಾ Pluralism ಒಂದು ಸಿದ್ಧಾಂತವಲ್ಲಿ ಅದು ತತ್ವಶಾಸ್ತ್ರದ ವ್ಯವಸ್ಥೆಗಳ ಸಿದ್ಧಾಂತ ಮಾತ್ರ. ಆದ್ದರಿಂದ ಬಹುಧರ್ಮಗಳಿಗೆ (Pluralism) ದೈವಶಾಸ್ತ್ರ (Theology) ಇರುವುದಿಲ್ಲ. There can be no pluralist theology of religion' ಭಾರತದಲ್ಲಿ ಹಿಂದಿನಿಂದ ಇಂದಿನವರೆವಿಗೂ ಬಹುಮುಖಿ ಚಿಂತನೆ ವಿವಿಧ ಸಮುದಾಯಗಳ ಸ್ವಾಭಾವಿಕ ಚಿಂತನಾ ಕ್ರಮವಾಗಿದೆ. ಈ ಕ್ರಿಯೆಗಳು ವೈಚಾರಿಕತೆಯ ಆಯಾಮಗಳನ್ನು ಸಹ ಒಳಗೊಂಡಿರುತ್ತದೆ. ಈ ಚಿಂತನಾ ಪ್ರಕ್ರಿಯೆ ಅಥವಾ process ಮುಖ್ಯವಾಗಿ ಆಯಾ ಧರ್ಮಗಳ ಉಪದೇಶಗಳು, ಪ್ರಕಟಣೆ revealations ಆಯಾ ಕಾಲದ ಧರ್ಮಗಳಲ್ಲಿ ಉಂಟಾದ experiences ಗಳನ್ನು ಒಳಗೊಂಡಿರುತ್ತದೆ. ಈ ಪ್ರಕ್ರಿಯೆಗಳ ಮೂಲ ಉದ್ದೇಶ ಆಯಾಧರ್ಮದರ್ಶಿಗಳಿಗಾದ ದರ್ಶನ (vision) ಗಳನ್ನು ಧರ್ಮ ಪ್ರಸಾರಣೆ, ಆರಾಧನೆ ಶ್ರಮ ಧರ್ಮ ಅನುಯಾಯಿಗಳ ಐಕ್ಯ ಮತ್ತು ಅನ್ಯೋನ್ಯತೆ ಮತ್ತು ಜನಸೇವೆಯ ಕಾರ್ಯಗಳಲ್ಲಿ ಧರ್ಮದ ನಿಯೋಗ ಅಥವಾ mission ಗಳಾಗಿ ಸಾರ್ಥಕತೆಯ ಕಡೆಗೆ ಧರ್ಮಗಳು ಮುಂದುವರಿಯುತ್ತವೆ. ಧರ್ಮಗಳ ಈ ಎಲ್ಲಾ ಪ್ರಕ್ರಿಯೆಗಳ ಮೂಲ ಉದ್ದೇಶ ಸತ್ವವನ್ನು ಪೋಷಿಸುವುದು ಮತ್ತು ಅರ್ಥೈಸಿಕೊಳ್ಳುವುದೇ ಆಗಿದೆ. ಧರ್ಮಗಳ ಈ ನಿಯೋಗ ಅಥವಾ ಸೇವೆಯಲ್ಲಿ ಮನುಷ್ಯರ, ಬುದ್ಧಿ, ಜ್ಞಾನ ಪರಮೋಚ್ಛ (Absolute) ಅಲ್ಲ, ಬದಲಾಗಿ ಪರಿಪೂರ್ಣವಲ್ಲದ ಒಂದು ಸ್ಥಿತಿ ಪ್ರಜ್ಞೆಯಾಗಿರುತ್ತದೆ. ಈ ಸಂದರ್ಭಗಳಲ್ಲಿ ಬಹುಧರ್ಮಗಳನ್ನು ಗೌರವಿಸುವುದು ಮತ್ತು ವಿವಿಧ ಧರ್ಮದರ್ಶನಗಳನ್ನು (visions) ತಿಳಿಯುವುದು ಪ್ರತಿಧರ್ಮದ ಜವಾಬ್ದಾರಿಯಾಗಿರುತ್ತದೆ. ಈ ಹಿನ್ನಲೆಯಲ್ಲಿ ಬಹುಧರ್ಮಗಳನ್ನು ಗೌರವಿಸುವುದು ಒಂದು ಧಾರ್ಮಿಕ ಕಲೆ ಕೂಡ ಮತ್ತು ಇತರ ಧಾರ್ಮಿಕ ದೃಷ್ಟಿಕೋನಗಳನ್ನು ಗೌರವಿಸುವುದು ಒಂದು ಉದಾರ ಮನಸ್ಥಿತಿಯೂ ಆಗಿದೆ. ಈ ಕಾರಣದಿಂದಾಗಿ ಬಹು ಧರ್ಮಗಳ ಪ್ರಧಾನ ದ್ವಾರಗಳ ಮೂಲಕ ಪರಿಪೂರ್ಣನಾದ ದೇವರ ಒಂದು ಭಾಗವನ್ನು ನೋಡಲು ಮಾತ್ರ ಸಾಧ್ಯವೇ ವಿನಹ ಸರ್ವೇಶ್ವರರ ಪರಿಪೂರ್ಣದರ್ಶನವಾಗಿದೆ ಎಂದು ಬೀಗುವ ಯಾವುದೇ ಧರ್ಮವು ವಿವಿಧ ಧರ್ಮ ಮತ್ತು ಧಾರ್ಮಿಕ ಸಿದ್ಧಾಂತಗಳನ್ನು ಗೌರವಿಸುವ ವಾದಕ್ಕೆ ತದ್ವಿರುದ್ಧವಾಗಿರುತ್ತದೆ.

ಕ್ರೈಸ್ತ ಸಂಪ್ರದಾಯದ ಪ್ರಮುಖ ಸಂತರಾದ ಪೌಲರು ಹೇಳುವಂತೆ *'ಈಗ ಕಂಚಿನ ದರ್ಪಣದಲ್ಲಿ ಕಾಣಿಸುವಂತೆ ದೇವರ ಮುಖವು ನಮಗೆ ಮೊಬ್ಬಾಗಿ ಕಾಣಿಸುತ್ತದೆ. ಆಗ ಮುಖಾಮುಖಿಯಾಗಿ ಆತನನ್ನು (ದೇವರನ್ನು) ನೋಡುವೆವು. ಈಗ ಸ್ವಲ್ಪಮಾತ್ರ ತಿಳಿದಿದೆ.'* (೧ ಕೊರಿಂದವರಿಗೆ ಬರೆದ ಪತ್ರ ೧೩:೧೨)

ಬಹುಮುಖ್ಯವಾಗಿ ಇಂದು ಬಹುತೇಕ ಧರ್ಮಗಳಲ್ಲಿ ಮತಾಂಧತೆ ಮಾತ್ರವಲ್ಲದೆ ಧಾರ್ಮಿಕ ಮೂಲಭೂತವಾದವು ಹೆಚ್ಚು ಅಪಾಯಕಾರಿಯಾಗಿ ಬೆಳೆಯುತ್ತಿದೆ. ಇಂಥಹ ಪರಿಸ್ಥಿತಿಯಲ್ಲಿ ವಿವಿಧ ಧರ್ಮಗಳಲ್ಲಿರುವ ಮತಾಂಧತೆಯ ಉದ್ಧಟತನವನ್ನು ವಿರೋಧಿಸಲು ಸಮಾನ ಮನಸ್ಕರು ಸಿದ್ಧರಾಗಬೇಕು. ಅಪೂರ್ಣ ಜ್ಞಾನದ ಆಧಾರದ ಮೇಲೆ ನಿಂತಿರುವ ಧಾರ್ಮಿಕ ಮತಾಂಧತೆ ಒಂದು ಪರೋಕ್ಷವಾದ ಧರ್ಮದ ಆಚರಣೆಯಾಗಿರುತ್ತದೆ. ಅದು ಪೂರ್ಣಜ್ಞಾನವಲ್ಲ ಅಥವಾ ಪೂರ್ಣ ಸಾಕ್ಷಾತ್ಕಾರವಲ್ಲ.

ಇಂದಿನ ಪ್ರಸ್ತುತ ಮೂಲಭೂತವಾದ ಮತ್ತು ಧರ್ಮಾಂಧತೆಗಳು ಪೈಪೋಟಿಯಲ್ಲಿ ಧರ್ಮಗಳ ಯಜಮಾನಿಕೆಯ ಡಾಂಭಿಕತನವನ್ನು ತಿರಸ್ಕರಿಸಬೇಕು. ಇತರ ಮತ ಧರ್ಮಗಳಿಗೆ ಸೂಚಿಸುವ

ಅಗೌರವ ಆತಂಕಕಾರಿಯಾಗಿದೆ. ಧರ್ಮಗಳಲ್ಲಿಯೇ ಇರುವ ಅಶಿಸ್ತು, ಭ್ರಷ್ಟಾಚಾರ, ಸ್ವಜನಪಕ್ಷಪಾತ, ಮೌಢ್ಯಗಳು ಮತ್ತು ಧಾರ್ಮಿಕ ಮಿಥ್ಯೆಗಳು ಇಂದು ಜನರನ್ನು ಸುಲಿಗೆ ಮಾಡುವ ಹಂತವನ್ನು ತಲುಪಿವೆ. ಈ ಶೋಷಣಾ ಪ್ರವೃತ್ತಿ ಭಾಗಶಃ ಸಾರ್ವತ್ರಿಕವಾಗಿವೆ. ಆದರೆ ಸ್ವಧರ್ಮದಲ್ಲಿ ಶ್ರದ್ಧೆ ಇತರ ಧರ್ಮಗಳ ಬಗ್ಗೆ ಗೌರವ ಎಂಬ ಜೀವಪರ ಮತ್ತು ಜನಪದ ವೈಚಾರಿಕ ದೃಷ್ಟಿಕೋನ ಇಂದು ಅತಿಮುಖ್ಯವಾದ ಧಾರ್ಮಿಕ ನೆಲೆಗಟ್ಟಾಗಿದೆ. ಯಾವುದೇ ಧರ್ಮ ತನ್ನ ಧರ್ಮವೇ ಶ್ರೇಷ್ಠ ಹಾಗೂ ಇತರ ಧರ್ಮಗಳು ಕನಿಷ್ಠ ಎಂದು ಘೋಷಣೆ ಮಾಡುವುದು ಅಜ್ಞಾನದ ಸ್ವಘೋಷಣೆಯಾಗಿದೆ.

ಸ್ವಧರ್ಮದಲ್ಲಿ ಶ್ರದ್ಧೆ ಇತರ ಧರ್ಮಗಳ ಬಗ್ಗೆ ಗೌರವ ಎಂಬ ನಿರ್ಧಾರ ಒಂದು ತಾತ್ಕಾಲಿಕವಾದ ಹೊಂದಾಣಿಕೆಯೂ ಅಲ್ಲ. ಅಥವಾ ಇತರ ಧರ್ಮಗಳ ಬಗ್ಗೆ ತೋರುವ ಕಪಟ ಭಕ್ತಿಯೂ ಅಲ್ಲ ಮತ್ತು ಯಾವುದೇ ಧರ್ಮ ನಡೆಸುವ ಸತ್ಯಾನ್ವೇಷಣೆಯ ಗುತ್ತಿಗೆಯೂ ಅಲ್ಲ. ಬಹು ಧರ್ಮಗಳನ್ನು ಗುರುತಿಸುವುದೆಂದರೆ ಸರ್ವಜನರ ಶಾಂತಿ ಸಂವೃದ್ಧಿಯನ್ನು ಅಂತರಾತ್ಮದಿಂದ ಬಯಸುವುದು, ಆಚರಿಸುವುದು ಮತ್ತು ಅದಕ್ಕಾಗಿ ಶ್ರಮಿಸುವುದೇ ಆಗಿದೆ. 'ಸರ್ವೇಜನೋ ಸುಖಿನೋ... ಈ ಬಹುಧರ್ಮಗಳ ಬಗೆಗಿನ ಗೌರವ ಎಲ್ಲಾ ಮಾನವರನ್ನು ಗೌರವಿಸುವ ಕ್ರಮ ಹಾಗೂ ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನವನ್ನು ಕ್ರಮಪಡಿಸಿಕೊಳ್ಳುವ ತಿದ್ದುಪಡಿಯೂ ಆಗಿದೆ. ಇಂದಿನವರನ್ನು ಧಾರ್ಮಿಕ ಬದುಕಿನಲ್ಲಿರುವ ಇತಿಮಿತಿಗಳನ್ನು ತಿಳಿದು ಸಾಮೂಹಿಕವಾಗಿ ಮಾನಸಾಂತರ ಪಡುವ ಧರ್ಮ ಧರ್ಮಗಳ ನಡುವೆ ಇರುವ ದ್ವೇಷ ಅಸೂಯೆಗಳನ್ನು ನಿವಾರಣೆ ಮಾಡಿಕೊಳ್ಳುವ ವೇದಿಕೆ ಅಥವಾ ಮಂಟಪಗಳಾಗಬೇಕು.

ಸ್ವಧರ್ಮದಲ್ಲಿ ಶ್ರದ್ಧೆ ಇತರ ಧರ್ಮಗಳ ಬಗ್ಗೆ ಗೌರವ ಕೇವಲ ಧಾರ್ಮಿಕ ವಲಯಗಳಲ್ಲಿ ತೋರಿಸುವ ಧಾರ್ಮಿಕ ಸೌಜನ್ಯವಾಗಿರಬಾರದು. ಬದಲಾಗಿ ಪ್ರತಿ ಧರ್ಮಗಳಲ್ಲಿರುವ ಮಾನವೀಕರಣದ (Humanization) ಗುಣಧರ್ಮವು ಯಾವ ರೀತಿಯಲ್ಲಿ ದೈವಿಕ ಗುಣಗಳಾಗಿ ಮಾರ್ಪಡಲು ಸಾಧ್ಯ ಎಂಬ ಕ್ರಿಯೆ-ಪ್ರಜ್ಞೆ (Praxix)ಯನ್ನು ಗುರುತಿಸುವುದೇ ಆಗಿದೆ. ಇದೇ ಇಂದು ಎಲ್ಲಾ ಧರ್ಮಗಳಲ್ಲಿರಬೇಕಾದ ಸಾಕ್ಷಿಪ್ರಜ್ಞೆ, ಸರ್ವರನ್ನು ಸೃಷ್ಟಿಸಿ ಸಲಹುವ ದೇವರ ಪ್ರೀತಿ, ಕೃಪೆಯನ್ನು ಸಾರುವ, ನಾನು, ನಾವು. ನಮ್ಮ ನಮ್ಮ ಧಾರ್ಮಿಕ ನೆಲೆಗಳ ಶ್ರೇಷ್ಠತೆಯ ಗುತ್ತಿಗೆಯಿಂದ ಹೊರಬೇಕು. ಜಾತಿ, ಧರ್ಮ, ಸಿದ್ಧಾಂತ ಮತ್ತು ದೈವಶಾಸ್ತ್ರಗಳ ಹಿನ್ನಲೆಗಳನ್ನು ಬದಿಗಿರಿಸಿ ಸರ್ವರೂ ದೈವಸ್ವರೂಪಿಗಳು, ದೇವರ ಮಕ್ಕಳು ದೇವರ ಮಹಾಕೃಪೆಗೆ ಪಾತ್ರರು ಎಂಬ ಸತ್ಯವನ್ನು ಅರಿಯಬೇಕು. ಬೈಬಲ್ಲಿನಲ್ಲಿ ತಿಳಿಸಿರುವಂತೆ **'ದೇವರು ಮನುಷ್ಯನನ್ನು (Adam) ತನ್ನ ಸ್ವರೂಪದಲ್ಲಿ ಉಂಟುಮಾಡಿದನು.'** (ಆದಿ ೧:೨೭) ಈ ವಾಕ್ಯ ಕ್ರೈಸ್ತರಿಗೆ ಮಾತ್ರ ಸೀಮಿತವಾಗಿಲ್ಲ. ಬದಲಾಗಿ ಎಲ್ಲಾ ಮನುಷ್ಯರು ದೇವಸ್ವರೂಪಿಗಳೆಂದು ಇದೇ ದೇವರ ಸ್ವರೂಪ ಯೇಸು ಕ್ರಿಸ್ತನು ನರಾವತಾರಿಯಾಗಿ ಜನಿಸಿ, ಸೇವೆಯಲ್ಲಿ ಬೋಧನೆಯಲ್ಲಿ ದೇವರನ್ನು ಮಹಿಮಪಡಿಸಿ ಶಿಲುಬೆಯ ಮೇಲೆ ಎಲ್ಲರ ರಕ್ಷಣೆಯನ್ನು ಬಯಸಿ ಪ್ರಾಣಾರ್ಪಣೆ ಮಾಡಿದರು ಮತ್ತು ದೇವರ ಪ್ರೀತಿಯನ್ನು ಯಜ್ಞವಾಗಿ ಶಿಲುಬೆಯ ಮೇಲೆ ಅನಾವರಣ ಮಾಡಿದರು.

ಸ್ವಧರ್ಮದಲ್ಲಿ ಶ್ರದ್ಧೆ ಮತ್ತು ಇತರ ಧರ್ಮಗಳ ಬಗ್ಗೆ ಗೌರವವನ್ನು ನಾಶ ಮಾಡುತ್ತಿರುವ ಪರಿಸ್ಥಿತಿ ಹಾಗೂ ಅಂಶಗಳನ್ನು ಇಂದು ಗುರುತಿಸುವುದು ಪ್ರತಿ ಧರ್ಮಗಳ ಆತ್ಮವಿಮರ್ಶೆಯಾಗಬೇಕು. ಮೂಲಭೂತವಾಗಿ ಧಾರ್ಮಿಕ ಮತಾಂಧತೆ ಜಾಗತೀಕವಾಗಿ ಕ್ರಿಶ್ಚಿಯನ್, ಇಸ್ಲಾಮ್ ಬೌದ್ಧಧರ್ಮ, ಹಿಂದೂ ಧರ್ಮ ಮತ್ತು ಇತರ ಧರ್ಮಗಳಲ್ಲಿ ಸಿದ್ಧಾಂತಗಳಲ್ಲಿ ಒಂದು ಹೆಚ್ಚು ಆವರಿಸಿದೆ. ಇದೇ ಮೂಲಾಭೂತ ವಾದವು ಒಂದು ಹೆಜ್ಜೆ ಮುಂದೆ ಹೋಗಿ ಪ್ಲಾಸ್ಟಿಕ್ ಶಕ್ತಿಗಳಾಗಿ ನಿರ್ದಾಕ್ಷೀಣ್ಯವಾದ ಜೀವ ವಿರೋಧಿ, ಜನವಿರೋಧಿ ಸಿದ್ಧಾಂತಗಳಾಗಿ ಎಲ್ಲಾ ಧರ್ಮಗಳಲ್ಲಿನ ಮೂಲತತ್ವಗಳನ್ನು ಧರ್ಮ ಸ್ಥಾಪಕರ ಜೀವಪರ, ಜನಪರ ದೇವ ಸಂದೇಶವನ್ನು ಮತ್ತು ಸೇವೆಯ ಗುರಿಯನ್ನು ನಾಶ ಮಾಡುತ್ತಿವೆ.

ಪ್ರಪಂಚದ ಮುಖ್ಯಧರ್ಮಗಳು ಪ್ರತಿ ಸಮುದಾಯಕ್ಕೂ ಮತ್ತು ಪ್ರತಿ ಮನುಷ್ಯನಿಗೂ ತಮ್ಮ ಬೋಧನೆ ಮತ್ತು ಸೇವೆ ಮಾಡುವುದು ಧರ್ಮವೆಂದು ಪ್ರಾಥಮಿಕವಾಗಿ ತಿಳಿದುಕೊಂಡಿರುತ್ತದೆ. ಈ ಕಾರಣಕ್ಕಾಗಿ ಪ್ರತಿಧರ್ಮವೂ ಮನುಷ್ಯರನ್ನು ಸಮುದಾಯಗಳನ್ನು ದ್ವೇಷಿಸುವುದಿಲ್ಲ. ಬದಲಾಗಿ ಪ್ರೀತಿಸುತ್ತವೆ; ಗೌರವಿಸುತ್ತವೆ ಮತ್ತು ಆದರಿಸುತ್ತವೆ. ಆದರೆ ಇಂದಿನ ಮತಾಂಧತೆ ಮತ್ತು ಧಾರ್ಮಿಕ ಮೂಲಭೂತವು ಧರ್ಮವಾಗಿರದೆ ದ್ವೇಷವಾಗಿರುವುದರಿಂದ ಮನುಷ್ಯಕುಲವನ್ನೇ ನಾಶ ಮಾಡುತ್ತಿದೆ. ಉಗಮಕ್ಕೆ ಕಾರಣವಾದ ಮೂಲದರ್ಶನಗಳನ್ನು ನಾಶ ಮಾಡಿವೆ. ಧರ್ಮಗಳ ದ್ವೇಷ ಹಾಗೂ ಧರ್ಮಾಂಧತೆಯ ವಿಕೃತಿಯು ಮುಂದುವರೆದು ಸಮುದಾಯ ಸಮುದಾಯಗಳ ಮಧ್ಯೆ ಇರುವ ಸಾವಯವ ಸಜೀವ ಸಂಬಂಧಗಳು ಇಲ್ಲದಂತಾಗಿವೆ. ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಕೊಂಡಿಗಳು ಮನುಷ್ಯ ಮನುಷ್ಯರ ಮಧ್ಯೆ ಇಲ್ಲದಂತಾಗಿದೆ.





ಧರ್ಮಗಳು ಸಾಮಾನ್ಯವಾಗಿ ಶಾಂತಿ, ಸಮೃದ್ಧಿ, ಸಮಾನತೆಗಳಿಗೆ ಪ್ರೇರಣ ಶಕ್ತಿಗಳಾಗಿವೆ. ಆದರೆ ಈ ಮೂಲ ಸತ್ವವು ವಿವಿಧ ಸಿದ್ಧಾಂತಗಳಾಗಿ ರಾಜಕೀಯ, ಆರ್ಥಿಕ ಶೋಷಣೆಯ ವಿನಾಶಕಾರಿ ಅಸ್ತ್ರಗಳಾಗಿವೆ. ಇತರ ಧರ್ಮಗಳನ್ನು ನಿರಾಕರಿಸುವ ಮತ್ತು ತಾನು, ತಾವು ಸಾರುವ ಧರ್ಮವೇ ಪರಮೋಚ್ಚ ಸತ್ಯವೆಂಬ ಉದ್ಧಟತನದ ರಾಜಕೀಯ ಹಾಗೂ ಸಾಂಸ್ಕೃತಿಕ ಕ್ರೌರ್ಯಗಳಿಗೆ ಕಾರಣವಾಗಿದೆ. ಇದರೊಂದಿಗೆ ಸ್ವಧರ್ಮದಲ್ಲಿ ಶ್ರದ್ಧೆಯ ವಿರೋಧವಾಗಿ ಸ್ವಧರ್ಮ ದಲ್ಲಿ ನಂಬಿಕೆ, ವಿಶ್ವಾಸ, ಗೌರವ ಮತ್ತು ಸತ್ಯಾನ್ವೇಷಣೆಯಲ್ಲಿ ಆಸಕ್ತಿ ಕ್ಷೀಣಿಸುತ್ತಿದೆ. ಧರ್ಮ ಧರ್ಮಗಳ ನಡೆಯುವ ಸಂವಾದ, ಅಧ್ಯಯನಗಳು ಮತ್ತು ಸಂಭಾಷಣೆಗಳು ಅರ್ಥ ಕಳೆದುಕೊಂಡಿವೆ.

ಅಂಧಶ್ರದ್ಧೆ ಮತ್ತು ಮೂಲಭೂತ ವಾದದಿಂದಾಗಿ ಜನಕಲ್ಯಾಣ ಸೇವೆ ಮತ್ತು ಸೇವಾಕೇಂದ್ರಗಳು ಅರ್ಥ ಕಳೆದು ಕೊಂಡಿವೆ. ಸೇವಾ ಕೇಂದ್ರಗಳ ಮೇಲಿನ ದಾಳಿಗಳು, ಧಾರ್ಮಿಕ ವಲಯದ ಭ್ರಷ್ಟಾಚಾರ ಮತ್ತು ಸ್ವಧರ್ಮ ವಿರೋಧಿ ಚಟುವಟಿಕೆಗಳು ಧಾರ್ಮಿಕ ಮೂಲಭೂತವಾದವನ್ನು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಬೆಂಬಲಿಸುವ ಶಕ್ತಿಗಳಾಗಿವೆ.

ಆದರೆ ಮಾನವತೆಯನ್ನು ಮೆರೆಯುವ ಧರ್ಮಗಳು ಈ ಎಲ್ಲಾ ಸಂದಿಗ್ಧ ಪರಿಸ್ಥಿತಿಯಲ್ಲಿಯೂ ನಿರಂತರವಾಗಿ ಸ್ವಧರ್ಮದಲ್ಲಿ ಶ್ರದ್ಧೆ ಮತ್ತು ಆತ್ಮವಿಮರ್ಶೆಗೆ ಹಿಂದೆಂದಿಗಿಂತಲೂ ಇಂದು ಹೆಚ್ಚು ಅವಶ್ಯವಾಗಿದೆ. ಧರ್ಮಗಳು ಸಮಾಜದ ಸೇವೆಯಲ್ಲಿ ತಮ್ಮ ಅನುಯಾಯಿಗಳನ್ನು ಹೆಚ್ಚು ತೊಡಗಿಸುವುದರಿಂದ ಬಹುಧರ್ಮೀಯರ ಸೇವೆಯನ್ನು ಮಾಡಲು ತಮ್ಮನ್ನು ಮುಡುಪಾಗಿರಿಸಿಕೊಳ್ಳಬೇಕು. ಪ್ರತಿ ಧರ್ಮವು ತನ್ನ ತನ್ನ ಧರ್ಮೋದ್ದೇಶಗಳನ್ನು ಅನುಷ್ಠಾನಗೊಳಿಸಿಕೊಳ್ಳಬೇಕಾದರೆ, ಧಾರ್ಮಿಕ ಪ್ರತ್ಯೇಕತೆಯಿಂದ ಸರ್ವ ಧರ್ಮ ಐಕ್ಯತೆಯ ಹಾದಿಯಲ್ಲಿ ಮುಂದುವರಿಯಬೇಕು. (From religious exclusivism to religious unity)

ನಿಷ್ಪಕ್ಷವಾದ ಸೇವೆ (ಅಕ್ಷರ, ಅನ್ನ, ಆಸರ, ಅರಿವು)ಯಲ್ಲಿ ಇಂದು ಸಿದ್ಧಗಂಗಾ ಮಠ ಎಲ್ಲರಿಗೂ ಆದರ್ಶಪ್ರಾಯವಾಗಿದೆ. ಅಲ್ಪಸಂಖ್ಯಾತ ತಳ ಸಮುದಾಯಗಳು ಗೌರವದ ಬದುಕನ್ನು ನಡೆಸಲು ಶ್ರೀ ಶ್ರೀಗಳು ಯುಗಪುರುಷರಾಗಿ ಸೇವೆ ಸಲ್ಲಿಸಿದ್ದಾರೆ. ಸೈದ್ಧಾಂತಿಕ ಕಥನಗಳಿಂದ ಆಧ್ಯಾತ್ಮಿಕತೆಯ ಕಡೆಗೆ ನಡೆಯಲು ಧರ್ಮಗಳ ಪ್ರಯಾಣ ಬೆಳೆಸಬೇಕು ಎಂಬ (Doctrinal difference to spiritual journey) ವಾದಕ್ಕೆ ಶ್ರೀ ಶ್ರೀಗಳ ಹಾಗೂ ಶ್ರೀ ಬಳಗ ಒಂದು ಉತ್ತಮ ಉದಾಹರಣೆಯಾಗಿದೆ. ವಿವಿಧ ಧರ್ಮಗಳು ತಾವೇ ಶ್ರೇಷ್ಠವೆಂಬ ಭ್ರಮೆಯಿಂದ ಹೊರಬಂದು ಸಿದ್ಧಗಂಗಾ ಕ್ಷೇತ್ರದಂತೆ ಜನಸಾಮಾನ್ಯರ ವಾಸ್ತವಕ್ಕೆ ಧರ್ಮವಾಗಿ ಪರಿವರ್ತನೆಯಾಗಬೇಕಾಗಿದೆ.

ಸಮಾನ ಮನಸ್ಕರ ಸಂವಾದದಿಂದಾಗಿ ಮನುಕುಲದ ನಾಶವನ್ನು ತಪ್ಪಿಸಬೇಕಾಗಿದೆ. ಸಂವಿಧಾನದ ಮೂಲ ಉದ್ದೇಶ, ಜಾತ್ಯಾತೀಯ ಧರ್ಮಾತೀತ ಆಶಯಗಳನ್ನು ಗೌರವಿಸುವುದರಿಂದ ಇತರ ಧರ್ಮಗಳ ಬಗ್ಗೆ ಗೌರವ ವೃದ್ಧಿಯಾಗುತ್ತದೆ.

ಬೈಬಲ್ಲಿನಲ್ಲಿ ವಿವರಿಸುವಂತೆ ನಿನ್ನ ನೆರೆಯುವನು ಯಾರು? ನಿನ್ನ ನೆರೆಯವನನ್ನು ನಿನ್ನಂತೆಯೆ ಪ್ರೀತಿಸು. ನಿಮ್ಮ ವೈರಿಗಳನ್ನು ಪ್ರೀತಿಸಿರಿ ಎಂಬ ಏಸುಕ್ರಿಸ್ತರ ವಾಣಿ ಧರ್ಮಗಳ ಮಧ್ಯೆ ಇರುವ ಕ್ರೂರ ಗೋಡೆಗಳನ್ನು ಒಡೆದು ಹಾಕಲು ಸಹಾಯ ಮಾಡುತ್ತದೆ. ❑



ಮಾಡುವಾತ ನಾನಲ್ಲಯ್ಯಾ, ನೀಡುವಾತ ನಾನಲ್ಲಯ್ಯಾ,  
ಮಾಡುವಾತ ನಾನಲ್ಲಯ್ಯಾ, ನಿಮ್ಮ ಕಾರುಣ್ಯವಲ್ಲದೆ.  
ಬೇಡುವಾತ ನಾನಲ್ಲಯ್ಯಾ, ಬೇಡುವೆಂಬ ಒಡತಿ ಮಾಡಿಕೊಂಬಂತೆ  
ಎಲೆ ದೇವಾ, ಮನೆಯ ತೊತ್ತು ಆಲಸಿದಡೆ ಒಡತಿ ಮಾಡಿಕೊಂಬಂತೆ  
ನಿನಗೆ ನೀ ಮಾಡಿಕೊ, ಕೂಡಲಸಂಗಮವದೇವಾ.

* * *

ಇವನಾರವ, ಇವನಾರವ, ಇವನಾರನೆಂದೆನಿಸದಿರಯ್ಯಾ  
ಇವನಾರವ, ಇವನಾರವ, ಇವ ನಮ್ಮವ"ನೆಂದೆನಿಸಯ್ಯಾ  
"ಇವ ನಮ್ಮವ, ಇವ ನಮ್ಮವ, ಇವ ನಮ್ಮವ"ನೆಂದೆನಿಸಯ್ಯಾ  
ಕೂಡಲ ಸಂಗಮದೇವಾ, ನಿಮ್ಮ ಮನೆಯ ಮಗನೆನಿಸಯ್ಯಾ.

– ಬಸವಣ್ಣ



# ಸ್ವಧರ್ಮದಲ್ಲಿ ಶ್ರದ್ಧೆ- ಇತರ ಧರ್ಮಗಳ ಬಗ್ಗೆ ಗೌರವ

## ಮುಸ್ಲಿಂ ಮತ್ತು ಇಸ್ಲಾಂ ಧರ್ಮ

**– Dr. Mumtaz Ahamd Khan**
*Founder President*
*Al-Ameen Educational Institution*

We are all assembled here to commemorate and celebrate the 105th birthday of our Swamygalu. Swamiji is the role model to social workers like us. Because of his achievements we have developed the courage to start private educational institutions. I am deeply grateful for having bestowed on me an honour to participate in this function. Not only you have honoured me, you have honoured the entire Muslim community.

I have been asked to speak about Islam. Before I start speaking about Islam, do not misjudge Islam by the wrong actions of Muslims. Like all religions, in Islam also there are some misguided people, who do what they like and bring a bad name to our religion. We should not judge Islam by their actions. Islam gives great importance to a traveller. But a traveller however comfortable he travels, he always is tired & wants rest, wants solace, and wants comfort. But from the last eighty years, Swamygalu have been doing this. Any traveller who passes through Tumakur, is always welcome to the Muth, refreshing himself having good meal & goes.

Islam always gives importance to the neighbour we say love the neighbour. Once the companions of holy messenger got god's blessings & asked, "why are you giving more importance to neighbour?" Holy messenger said, if god had permitted me I would have shared my property. Look at the present day world. All our quarrels are with our neighbour in sharing of water, sharing of electricity, disposal of sewage, noise pollution. If you go to the court all our litigations are between the neighbours. Our Swamygalu, for the past eighty years has been serving the humanity without going to the reason, whether they are Hindus, Muslims, Christians, Sikhs. He has been treating them as human beings. Swamygalu have been following the true teachings of Islam.

Now I am going to speak about the emancipation of women that Islam has given. That was thousands of years ago. Here again I request the audience, do not mistake Islam, because of misguided actions of Muslims, who did not treat women well. In Islam unless a bride, signs her consent on a form in the presence of three witnesses, she can not be given in marriage to anybody. First she has to sign the document. In Islam no dowry but dower. The bridegroom has to give the money to the bride. In addition to that, the wife gets 1/8th share of her husband's property & 1/3rd share of her father's property. That means you put together dower 1/8th share of her husband's property & 1/3rd share of her father's property it equals to the wife's share.

Islam gives a lot of importance to orphans. Our Holy messenger said "if you pass your hand affectionately on the head of an orphan you will get as many blessings as the number of hairs are on the orphan's head. And he said" A person who serves orphans will stand in heaven along with me like two fingers of my hand. How many thousand orphans Swamygalu has helped! how many orphans are made a resource of the humanity! They spread all over the world. Orphans have become themselves asset to the society. The blessings of a traveler, the blessings of the neighbour, the blessings of women, who our Swamygalu have educated & made Women folk not only housewives but participants in the financial burden of the family has given them right position in society, the blessings of the orphans, these all put together has given health & longevity Swamygalu. It is his blessings there with us. May god bless him more life. I am very happy to tell you that in the past few months there have a been a movement among the Muslims. We also have number of schools of thoughts. The greatest happiness is that, in all these meetings Muslims put together, said, "we should come together with all the religions for the sake of humanity". On this occasion I will join all of you in the prayers for health & longevity of swamigalu. May god bless him. Thank you very much. ❑







# ಸ್ವಧರ್ಮದಲ್ಲಿ ಶ್ರದ್ಧೆ – ಇತರ ಧರ್ಮಗಳ ಬಗ್ಗೆ ಗೌರವ

## ಶರಣರ ಚಿಂತನೆಗಳು ದಾರಿ ದೀಪ

– ಡಾ|| ಬಸವರಾಜ ಜಗಜಂಪಿ
ನಿವೃತ್ತ ಪ್ರಿನ್ಸಿಪಾಲರು, ಲಿಂಗರಾಜು ಕಾಲೇಜು, ಬೆಳಗಾವಿ

ಬಸವಾದಿ ಶಿವಶರಣರನ್ನು, ಪ್ರಪಂಚದ ಸಕಲ ದಾರ್ಶನಿಕರನ್ನು ಭಕ್ತಿಯಿಂದ ಸ್ಮರಿಸಿ ನೂರಾಐದು ವಸಂತಗಳನ್ನು ಅರ್ಥಪೂರ್ಣವಾಗಿ, ಸಾರ್ಥಕವಾಗಿ ಸಮಾಜದ ಸೇವೆಯಲ್ಲಿ ತೊಡಗಿಸಿಕೊಂಡ ನಮ್ಮೆಲ್ಲರಿಗೂ ಪೂಜ್ಯರಾದ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಅವರನ್ನು ಹಾರ್ದಿಕವಾಗಿ ಅಭಿನಂದಿಸುತ್ತೇನೆ. ಬಸವಣ್ಣನನ್ನು ಪ್ರಭುದೇವರು ಜಗದ ಉತ್ಸಾಹ ಎಂದು ಕರೆದರು. ಇವತ್ತು ನಾವು ಶ್ರೀ ಶಿವಕುಮಾರ ಸ್ವಾಮಿಯವರನ್ನು ಈ ಯುಗದ ಉತ್ಸಾಹ ಎಂದು ಕರೆಯಬೇಕಾಗುತ್ತದೆ.

ಸ್ವಧರ್ಮ ನಿಷ್ಠೆ, ಪರಧರ್ಮದಲ್ಲಿ ಸಹಿಷ್ಣುತೆ ಎಂಬ ವಿಚಾರವಾಗಿ. ಒಂದೇ ಒಂದು ಮಾತನ್ನು ನಾನು ಹೇಳಲು ಇಷ್ಟಪಡುತ್ತೇನೆ. ಒಳ್ಳೆಯ ವಿಚಾರಗಳು ಅವು ಎಲ್ಲಿಂದ ಬಂದರೂ ನಮಗೆ ಸ್ವಾಗತಾರ್ಹ. ಹಾಗೇ ಬೆಳಕು ಎಲ್ಲಿಂದ ಬಂದರೂ ಅದು ಬೆಳಕೇ. ಅಂತಹ ಒಳ್ಳೆಂಯ ವಿಚಾರಗಳನ್ನು ನಾವು ಅಳವಡಿಸಿಕೊಂಡು, ಹುಟ್ಟುತ್ತ ಮನುಷ್ಯನಾಗಿ ಬೆಳೆಯುತ್ತ ನಾವು ವಿಶ್ವ ಮಾನವನಾಗಿ ಬೆಳೆಯಬೇಕಾಗುತ್ತದೆ. ಕಬೀರದಾಸರ ಸಂದೇಶದಲ್ಲಿ ನಾವು ಹೇಳುವುದಾದರೆ; ಎರಡೂವರೆ ಅಕ್ಷರದ ಪ್ರೀತಿ ಎಂಬುದೇನಿದೆ ಅದನ್ನು ನಾವು ತಿಳಿದುಕೊಂಡರೆ ಜಾತಿ ಧರ್ಮ ಎಂಬ ಗೋಡೆ ನಮ್ಮ ಇರುವುದಿಲ್ಲ ಅದು ಸೇತುವೆಯಾಗಿ ಪರಿಣಮಿಸುತ್ತದೆ ಎಂದು ನಾನು ಇಲ್ಲಿ ಹೇಳಲಿಕ್ಕೆ ಇಚ್ಛಿಸುತ್ತೇನೆ.

ಬಹಳ ಮಹತ್ವದ ಒಂದು ಮಾತನ್ನು ಇಲ್ಲಿ ಹೇಳಲಿಕ್ಕೆ ಬಯಸುತ್ತೇನೆ. ಭಾವೈಕ್ಯದ ತುತ್ತ ತುದಿಯನ್ನು ಮುಟ್ಟಿದಾಗ ಒಂದು ಧರ್ಮ ವಿಶ್ವಧರ್ಮವಾಗುತ್ತದೆ. ಯಾವುದೇ ಧರ್ಮವನ್ನು ನಾವು ನೋಡಿದರೆ ನಮ್ಮ ಭಾವನೆಗಳು ಐಕ್ಯವಾಗಬೇಕು. ಅಂತಹ ಒಂದು ಧರ್ಮ ಪ್ರಪಂಚದ ಶ್ರೇಷ್ಠವಾದ ಧರ್ಮವಾಗುವ ಅರ್ಹತೆಯನ್ನು ಪಡೆಂಯುತ್ತದೆ. ಈ ನಿಟ್ಟಿನಲ್ಲಿ ಇಂದಿನ ಸಭೆ ಬಹಳ ಅರ್ಥಪೂರ್ಣವಾದ ಚಿಂತನೆಗೆ ಹಚ್ಚುವಂತೆ ಮಾಡಿದೆ. ಈ ವರ್ಷ ಮಹಾ ಮಾನವತಾವಾದಿ ಬಸವಣ್ಣನವರ ಜಯಂತಿ ಆಚರಣೆಯ ಶತಮಾನೋತ್ಸವ ವರ್ಷ. ಬಸವಣ್ಣನವರು ಎಂಟನೂರು ವರ್ಷಗಳ ಹಿಂದೆ ಆಗಿಹೋದ ಮಹಾನುಭಾವರು ಎಂಬುದನ್ನು ಮಾತ್ರ ನಾವು ತಿಳಿದುಕೊಂಡರೆ ಬಸವಣ್ಣನ ವ್ಯಕ್ತಿತ್ವವನ್ನು ನಾವು ತಿಳಿದುಕೊಂಡಂತೆ ಅಲ್ಲ. ವ್ಯಕ್ತಿಗಿಂತ ವ್ಯಕ್ತಿತ್ವ ಬಹಳ ಮಹತ್ವದ್ದು. ಚರಿತ್ರೆಗಿಂತ ಚಾರಿತ್ರ್ಯ ಬಹಳ ಮಹತ್ವದ್ದು. ಬಸವಣ್ಣನವರನ್ನು ಒಬ್ಬ ವಚನಕಾರನಾಗಿ, ಶರಣನಾಗಿ, ಭಕ್ತಿ ಭಂಡಾರಿಯಾಗಿ, ಸಮಾಜ ಸುಧಾರಕನಾಗಿ ನೋಡಿದರೆ ಮಾತ್ರ ಸಾಲದು. ಬಸವಣ್ಣನವರನ್ನು ನಾವು ಎಷ್ಟು ತಿಳಿದುಕೊಂಡರೂ ಕಡಿಮೆಯೇ.

ನಾನು ಚಿಕ್ಕವನಿದ್ದಾಗ ಕೇಳಿದ ಒಂದು ಪಾಠ ನೆನಪಾಗುತ್ತದೆ; ನಾಲ್ಕು ಜನ ಕುರುಡರು ಆನೆಯನ್ನು ಮುಟ್ಟಿದರು. ಒಬ್ಬೊಬ್ಬನಿಗೆ ಒಂದೊಂದು ಅನುಭವವನ್ನು ಆನೆ ಕೊಟ್ಟಿತು. ಕಾಲನ್ನು ಮುಟ್ಟಿದ ಒಬ್ಬ ಹೇಳಿದ; ಇದು ಕಂಬ ಇದ್ದಂಗೆ ಇದೆ ಎಂದು ಹೇಳಿದ, ಸೊಂಡಿಲನ್ನು ಮುಟ್ಟಿದವ ಹೆಬ್ಬಾವು ಇದ್ದಂಗೆ ಇದೆ ಎಂದು ಹೇಳಿದ. ಅದರ ಬೆನ್ನನ್ನು ಮುಟ್ಟಿದವ ಗೋಡೆ ಇದ್ದಂಗೆ ಇದೆ ಎಂದು ಹೇಳಿದ. ಅದರ ಕಿವಿಯನ್ನು ಮುಟ್ಟಿದವ ಗೇರುವ ಮೊರ ಇದ್ದಂಗೆ ಇದೆ ಎಂದು ಹೇಳುತ್ತಾನೆ. ಅವರ ಅನುಭವ ನಿಜವೇ. ಎಲ್ಲರೂ ಆನೆಯನ್ನು ಮುಟ್ಟಿದ ಕುರುಡರೇ. ಅದೇ ರೀತಿ ಬಸವಣ್ಣನ ವ್ಯಕ್ತಿಯನ್ನು ಎಷ್ಟೆಷ್ಟು ತಿಳಿದುಕೊಳ್ಳಲು ಪ್ರಯತ್ನ ಮಾಡುತ್ತೇವೆ ಅಷ್ಟಷ್ಟು ಅಪರೂಪದ ಮಹಾನ್ ಶಕ್ತಿಯಾಗಿ ನಿಲ್ಲುತ್ತಾನೆ ಬಸವಣ್ಣ. ಅಂತೆಯೇ ಅಂದು, ಇಂದು ಎಂದೆಂದಿಗೂ ಬಸವಣ್ಣನವರ ಚಿಂತನೆಗಳು ಮತ್ತು ವ್ಯಕ್ತಿತ್ವ ಆದರ್ಶದ ನಿದರ್ಶನಗಳಾಗಿ ನಿಲ್ಲುತ್ತದೆ ಎಂಬುದನ್ನು ನಾವು ನೆನಪಿಸಿಕೊಳ್ಳಬೇಕಾಗುತ್ತದೆ. ಈ ಶತಮಾನೋತ್ಸವವನ್ನು ಒಂದು ನೂರು ವರ್ಷದ ಕಾಲಕ್ಕೆ ಹುಟ್ಟುಹಬ್ಬವಾಗಿ ಆಚರಿಸಲು ಪ್ರಾರಂಭ ಮಾಡಿದವರು ಧಾರವಾಡದ ಮೃತ್ಯುಂಜಯ ಅಪ್ಪಗಳು. ಅವರಿಗೆ ಹೆಗಲಿಗೆ ಹೆಗಲು ಹಚ್ಚಿ ದುಡಿದವರು ಕರ್ನಾಟಕ ಗಾಂಧಿ ಹರ್ಡೇಕರ್ ಮಂಜಪ್ಪನವರು. ಈ ಇಬ್ಬರೂ ವ್ಯಕ್ತಿಗಳು ಒಂದು ತತ್ತ್ವ ಇದ್ದಂತೆ. ಅಷ್ಟು ಅದ್ಭುತವಾದ ರೀತಿಯಲ್ಲಿ ಸುಸ್ವರ ನಾಂದಿ ಹಾಡಿದಂತಿರುವ ಈ ಕಾರ್ಯಕ್ರಮ ನೂರನೇ ವರ್ಷಕ್ಕೆ ಪಾದಾರ್ಪಣೆ ಮಾಡುತ್ತಿದೆ. ಎರಡು ಶತಮಾನಗಳ ಕೊಂಡಿಯಾಗಿ ಈ ಕಾರ್ಯಕ್ರಮ ಇವತ್ತು ನಮ್ಮ ಮುಂದೆ ನಿಲ್ಲುತ್ತಿದೆ. ಇಂತಹ ಸಂದರ್ಭದಲ್ಲಿ ನಮ್ಮ ಯುವಕರಿಗೆ ಬಸವಣ್ಣನವರ ಚಿಂತನೆಗಳು, ಶರಣರ ಚಿಂತನೆಗಳು ದಾರಿ ದೀಪವಾಗಬೇಕಾದಂತಹ ಅವಶ್ಯಕತೆ ಇದೆ. ನಾವು ಅನೇಕ ಸಭೆಗಳನ್ನು ನೋಡುತ್ತೇವೆ. ನಗೆಗಾರರ ಸಭೆಗಳನ್ನು ನೋಡುತ್ತೇವೆ. ಸಾವಿರ ಸಾವಿರ ಸಂಖ್ಯೆಯಲ್ಲಿ ಸೇರಿ, ಲಕ್ಷ ಲಕ್ಷ ರೂಪಾಯಿಗಳನ್ನು ಖರ್ಚು ಮಾಡಿ

ಅಂತಹ ಸಭೆಗಳಿಗೆ ನಾವು ಸಾಕ್ಷಿಯಾಗುತ್ತಿದ್ದೇವೆ. ಕೇಳುತ್ತೇವೆ, ಮರೆತು ಬಿಡುತ್ತೇವೆ. ಆದರೆ, ನಿರಂತರವಾಗಿ ನಮ್ಮನ್ನು ಮುನ್ನೆಡೆಸುವ ಶಕ್ತಿಯಾಗಿರುವ ಈ ಚಿಂತನೆಗಳನ್ನು ನಾವು ಯಾಕೆ ಕೇಳಬಾರದು, ನಮ್ಮನ್ನು ನಾವು ಯಾಕೆ ಉದ್ಧರಿಸಿಕೊಳ್ಳಬಾರದು ಎಂಬ ನಿಟ್ಟಿನಲ್ಲಿ ಈ ಶತಮಾನೋತ್ಸವದ ವರ್ಷಾಚರಣೆ ಮುನ್ನಡೆಸುವ ಶಕ್ತಿಯಾಗಲಿ ಎಂದು ನಾನು ಹಾರೈಸುತ್ತಿದ್ದೇನೆ.

ಬಸವಣ್ಣನವರ ಬಗ್ಗೆ ನಮ್ಮವರು, ನಮ್ಮ ಧರ್ಮೀಯರು, ಭಾರತೀಯರು ಹೇಳುವುದು ಮುಖ್ಯವಲ್ಲ. ಹೊರರಾಜ್ಯದವರು, ಹೊರದೇಶದವರು ಏನು ಹೇಳಿದ್ದಾರೆ ಎಂದು ಕೇಳಿದರೆ ನಮಗೆ ರೋಮಾಂಚನವಾಗುತ್ತದೆ. ಒಬ್ಬ ಮಹಾನ್ ಚಿಂತಕ ಹೇಳುತ್ತಾನೆ; ಬಸವೇಶ್ವರರು ಭಾರತದ ಪ್ರಪ್ರಥಮ ಮುಕ್ತ ಚಿಂತಕರು ಎಂದು ಹೇಳುವುದನ್ನು ಕೇಳಿದಾಗ ಬಸವಣ್ಣನವರ ಅಗಾಧವಾದ ವ್ಯಕ್ತಿತ್ವ ನಮ್ಮ ಕಣ್ಣುಮುಂದೆ ನಿಲ್ಲುತ್ತದೆ. ಶ್ರೀಕಂತನ್ ಎನ್ನುವ ಒಬ್ಬ ವಿದ್ವಾಂಸ ಹೇಳುತ್ತಾನೆ; ಸಿಂಪಲ್ ಲೈಫ್ ಮಹಾವೀರ, ಜಂಟಲ್ ಲೈಫ್ ಜೀಸಸ್ ಆ್ಯಂಡ್ ಕೈಂಡ್ ಲೈಫ್ ಬುದ್ಧ, ಬೋಲ್ಡ್ ಲೈಫ್ ಮಹಮ್ಮದ್ ಪೈಗಂಬರ್. ಇಲ್ಲಿ ನಾಲ್ಕು ವ್ಯಕ್ತಿಗಳ ಬಗ್ಗೆ ಆತ ಹೋಲಿಸಿ ಹೇಳುತ್ತಿದ್ದಾನೆ. ಬಹಳ ಸರಳನಾದವನು ಮಹಾವೀರ, ಕರುಣಾಮಯಿ ಬುದ್ಧ, ಸಭ್ಯ ಗೃಹಸ್ಥ ಜೀಸಸ್, ಬಹಳ ಧೈರ್ಯಶಾಲಿ ಮಹಮ್ಮದ್ ಪೈಗಂಬರ್. ಬಸವಣ್ಣ ಇಷ್ಟ ಲಿಂಗವನ್ನು ಪ್ರತಿಷ್ಠಾಪಿಸಿದವ. ಈ ಜಗದ ಸೃಷ್ಟಿಯ ಅದ್ಭುತ ಅಂತ ಹೇಳುತಾರೆ. ನಾವು ಎಷ್ಟೆಷ್ಟು ಬಸವಣ್ಣನ ಬಗ್ಗೆ ತಿಳಿದುಕೊಳ್ಳಲು ಪ್ರಯತ್ನ ಮಾಡುತ್ತೇವೆ ಅಷ್ಟಷ್ಟು ಆ ವ್ಯಕ್ತಿತ್ವ ಅಗಾಧವಾಗುತ್ತ ಹೋಗುತ್ತದೆ. ನಮ್ಮ ಶರಣರು ಹೇಳುವ ಒಂದು ವಚನವನ್ನು ನಾವಿಲ್ಲಿ ಮನಗಾಣುತ್ತಿದ್ದೇವೆ;

*ಎತ್ತೆತ್ತ ನೋಡಿದೆತ್ತತ್ತ ಬಸವನೆಂಬ ಬಳ್ಳಿ*
*ಎತ್ತಿ ನೋಡಿದಡೆ ಲಿಂಗವೆಂಬ ಗೊಂಚಲು*
*ಒತ್ತಿ ಹಿಂಡಿದೊಡೆ ಭಕ್ತಿ ಎಂಬ ರಸವಯ್ಯ*
*ಬಸವಾ ಬಸವಾ ಬಸವಾ ಎಂದು ಮಜ್ಜನಕ್ಕೆ*
*ಎರೆಯದವನ ಭಕ್ತಿ ಶೂನ್ಯ ಕಾಣ ಕಲಿದೇವರ ದೇವ*

ಬಸವಣ್ಣನ ವ್ಯಕ್ತಿತ್ವವನ್ನು ಕಟೆದು ನಿಲ್ಲಿಸಿದಂತಹ ಈ ವಚನವನ್ನು ಪ್ರಭುದೇವರ ವಚನಕ್ಕೆ ಇನ್ನೊಂದು ಪರ್ಯಾಯ ಅನ್ನಬಹುದು. ಮುಂದುವರಿದು ಹೇಳುವುದಾದರೆ;

*ಬ ಎಂದೊಡೆ ಭವ ಹರಿಯಿತ್ತಯ್ಯ*
*ಸ ಎಂಬಲ್ಲಿ ಸರ್ವಜ್ಞಾನಿಯಾದೆನು*
*ವ ಎಂಬಲ್ಲಿ ವಚಿಸುವೊಡೆ ಚೈತನ್ಯಾತ್ಮಕನಾದೆನು*
*ಇಂತು ಈ ಬಸವಾಕ್ಷರತ್ರಯ ಎನ್ನ ಸರ್ವಾಂಗದಲ್ಲಿ*
*ತೊಲಗಿ ಬೆಳಗುವ ಭೇದವನರಿದು ನಾನು*
*ಬಸವಾ ಬಸವಾ ಬಸವಾ ಎನ್ನುತ್ತಿರ್ದೆನು ಕಾಣಾ ಗುಹೇಶ್ವರ*

ಎಂತಹಾ ಮಾತು ನೋಡಿ. ಮೈಯೆಲ್ಲ ಬಸವಣ್ಣನನ್ನು ತುಂಬಿಕೊಂಡಂತಹ ಪ್ರಭುದೇವರು. ಪ್ರಭುದೇವರ ಪ್ರಶಸ್ತಿ ಪತ್ರ ಸಿಗಬೇಕೆಂದರೆ ಅದು ಸರಳವಲ್ಲ. ಯಾರಿಗೂ ಪ್ರಶಸ್ತಿಯನ್ನು ಕೊಡುವವರಲ್ಲ ಪ್ರಭುದೇವರು. ಆದರೆ, ಜಗದ ಉತ್ಸಾಹ ಎಂದು ಕರೆದ ಪ್ರಭುದೇವರು ಅಂತರಂಗದಲ್ಲಿ ಮೈಯೆಲ್ಲ ರಕ್ತಗತವಾಗಿ ತುಂಬಿಕೊಂಡ ಒಬ್ಬ ಮಹಾನ್ ವ್ಯಕ್ತಿ ಎಂಬುದನ್ನು ನಾವು ನೋಡಬೇಕು. ನಮ್ಮೊಂದಿಗೆ ಇರುವ ಕವಿ ರಾಷ್ಟ್ರಕವಿ ಡಾ.ಜಿ.ಎಸ್. ಶಿವರುದ್ರಪ್ಪನವರು ಹೇಳುತ್ತಿದ್ದಾರೆ. ಬಹಳ ಅದ್ಭುತವಾದ ಒಂದು ಕವಿತೆ ಇದು;

*ಇರಬಹುದು ನಿನಗಿಂತ ಅನುಭಾವದಲ್ಲಿ ದೊಡ್ಡವರು*
*ಮೇಲೇರಿ ಬಯಲಾದವರು*
*ಇರಬಹುದು ನಿನಗಿಂತ ದೊಡ್ಡ ತ್ಯಾಗಿಗಳು, ವಿರಾಗಿಗಳು*
*ಆದರೆ, ಇರಲಾರದೆಂದೇ ತೋರುತಿದೆ*
*ನಿನ್ನಂತೆ ನಿನ್ನ ಅಂಕುಡೊಂಕುಗಳನ್ನು ಕಂಡುಕೊಂಡವರು*
*ತಿದ್ದಿಕೊಂಡವರು*
*ಹೀಗಾಗಿ ನಿನ್ನ ಮಾತೆಲ್ಲ ಮುತ್ತಿನ ಹಾರ*
*ನಡೆಯೆಲ್ಲ ಲಿಂಗವ ಮೆಚ್ಚಿ ಅಹುದೆಹುದೆಂಬ ಪರಿ*
*ಇಲ್ಲಿ ಸಂದದ್ದು ಅಲ್ಲಿಯೂ ಸಂದಂತೆ ಬದುಕಿದ ನೀನು*
*ಸಂಗನ ಮುಂದೆ ಕರ್ಪೂರ ಉರಿದಂತೆ*

ಬಸವಣ್ಣನವರ ವ್ಯಕ್ತಿತ್ವದ ಬಹುಮುಖಗಳನ್ನು ನಾವಿಲ್ಲಿ ನೋಡುತ್ತಿದ್ದೇವೆ. ಬಸವಣ್ಣ ತನ್ನ ಅಂತರಂಗವನ್ನು ನಿರೀಕ್ಷೆ ಮಾಡಿಕೊಂಡಷ್ಟು ಬಹುಷಃ ಬೇರೆ ಯಾರೂ ಮಾಡಿಕೊಂಡಿಲ್ಲ. ನಮ್ಮ ಜನಪದ ಗರತಿ ಹೇಳುತ್ತಿದ್ದಾಳೆ;

*ಅತ್ತೀಯ ಹಣ್ಣು ಕಣ್ಣೀಗೆ ಬಲಕೆಂಪ*
*ಒಡೆದು ನೋಡಿದರೆ ಹುಳಭಾಳ*

ಅತ್ತಿ ಹಣ್ಣು ಕಣ್ಣಿಗೆ ಬಹಳ ಕೆಂಪಾಗಿ ಕಾಣ್ತದೆ. ಆದರೆ ಒಡೆದು ನೋಡಿದರೆ ಅದರಲ್ಲಿ ಹುಳಗಳು ತುಂಬಿಕೊಂಡಿರುತ್ತವೆ. ಹಾಗೆ ಬಸವಣ್ಣ ತನ್ನ ಅಂತರಂಗವನ್ನು ನೋಡಿಕೊಳ್ಳುವ ಪ್ರಯತ್ನ ಮಾಡುತ್ತಾನೆ. ಅವನು ಹೇಳುವ ಮಾತನ್ನು ಕೇಳಿ;

*ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯ*
*ವಿಚಾರಿಸಿದೊಡೆ ಏನೂ ಹುರುಳಿಲ್ಲವಯ್ಯ*

ಈ ರೀತಿ ನಮ್ಮೊಂದಿಗೆ ಬದುಕಿದ ಗಾಂಧೀಜಿ ಮಾತ್ರ ಅಂತರಂಗವನ್ನು ನಿರೀಕ್ಷೆ ಮಾಡಿಕೊಳ್ಳಲಿಕ್ಕೆ ಸಾಧ್ಯವಿದೆ. ಇಂತಹ ಮಹಾನುಭಾವರು ನಮ್ಮೆಲ್ಲರಿಗೆ ಮಾರ್ಗದರ್ಶಿಯಾದಂತವರು. ಇಂತಹ ಮಾತುಗಳನ್ನು ಹೇಳಲು ಕಾರಣವೇನೆಂದರೆ ಇಂತಹ ಅನೇಕ ಮಧುರವಾದ ನೆನಪನ್ನು ಬಸವಣ್ಣ ನಮಗಾಗಿ ಬಿಟ್ಟುಕೊಟ್ಟು ಹೋಗಿದ್ದಾನೆ. ಗಾಂಧೀಜಿಯ ಚರಿತ್ರೆಯನ್ನು ಬರೆದಂತಹ ಲೂಯಿ ಫಿಶರ್ ಎಂಬ ಒಬ್ಬ ವ್ಯಕ್ತಿ ಹೇಳ್ತಾ ಇದ್ದಾನೆ;

What a clean smell he manage to live behind ಇಂತಹುದೇ ಮಧುರವಾದ ನೆನಪನ್ನು ಬಸವಣ್ಣನವರು





ನಮಗೆ ಬಿಟ್ಟುಕೊಟ್ಟು ಹೋಗಿದ್ದಾರೆ. ಬಸವಣ್ಣನವರನ್ನು ನೆನಪಿಸಿ ಕೊಂಡರೆ ಬಿಸಿಲು ಬೆಳದಿಂಗಳಾಗುತ್ತದೆ. ನಮ್ಮ ಬದುಕು ಸಹನೀಯ ವಾಗುತ್ತದೆ. ನಮಗೆ ಬದುಕುವಂತಹ ಆತ್ಮವಿಶ್ವಾಸ ಸಿಗ್ತದೆ. ನಮ್ಮ ಚಿಂತೆ ದೂರವಾಗುತ್ತದೆ. ವಚನಗಳನ್ನು ಓದುತ್ತಾ ಹೋದ ಹಾಗೆ ಅಂತಹ ವ್ಯಕ್ತಿತ್ವವನ್ನು ನೀವು ನೋಡುತ್ತಾ ಹೋಗುತ್ತೀರಿ. ಬಸವಣ್ಣ ನಿಜಕ್ಕೂ ಸ್ವರೂಪಿಯಾಗಿರಬೇಕು ಅನಿಸುತ್ತದೆ ನನಗೆ. ಬಸವಣ್ಣನ ಬಗ್ಗೆ ಇಂಗ್ಲಿಷ್‌ನ ಒಬ್ಬ ಕವಿ ಎ ಸಾಮ್ ಆಫ್ ಲೈಫ್ ಎಂಬ ಕವಿತೆಯಲ್ಲಿ; ನಾನು ಪಿಯೂಸಿಯಲ್ಲಿದ್ದಾಗ ಅದನ್ನು ಓದಿದ್ದೆ. ಆತ ಕೊನೆಯಲ್ಲಿ ಹೇಳ್ತಾನೆ; Lifes all great men remind us we can make our lives uplime ಮಹಾನ್ ವ್ಯಕ್ತಿಗಳ ಬದುಕು ನಮಗೆ ಯಾವತ್ತೂ ಉದಾತ್ತವಾದ ಚಿಂತನೆಯನ್ನು ಕಲಿಸುತ್ತದೆ ಎಂಬುದಕ್ಕೆ ಡಬ್ಲ್ಯು.ಎಚ್.ಲಾಂಗ್ ಫೆಲೋನ ಮಾತು ಎಂಬವನ ಮಾತು ಇವತ್ತಿಗೂ ನಿಜವಾಗಿದೆ. ಅಂತೆಯೇ ಬಸವಣ್ಣ ಮುಕ್ತ ಚಿಂತಕನಾಗಿ, ಮಹಾನ್ ವ್ಯಕ್ತಿಗಳ ಎಲ್ಲ ಗುಣಗಳನ್ನು ಅಳವಡಿಸಿಕೊಂಡ ಶ್ರೇಷ್ಠ ಸಾಧಕನಾಗಿ ನಮಗೆ ಕಾಣುತ್ತಾನೆ. ಕಾಯಕವನ್ನು ಬದುಕಿ, ಬದುಕಿದಂತೆ ಬರೆದ, ಬರೆದಂತೆ ಬದುಕಿನ ಒಬ್ಬ ಕಾಯಕದ ನಾಯಕನಾಗಿ ಸಮಗ್ರ ಯುಗಪುರುಷನಾಗಿ ನಮ್ಮೆದುರಿಗೆ ನಿಲ್ಲುತ್ತಿದ್ದಾನೆ. ಒಬ್ಬೊಬ್ಬನಲ್ಲಿ ಒಂದೊಂದು ಕೊರತೆಯನ್ನು ನಾವು ನೋಡುತ್ತೇವೆ, ಆದರೆ ಬಸವಣ್ಣನಲ್ಲಿ ಸಮಗ್ರ ಯುಗಪುರುಷನಾಗುವ ಎಲ್ಲ ವ್ಯಕ್ತಿತ್ವವನ್ನು ನಾವು ನೋಡುತ್ತಿದ್ದೇವೆ. ಆತ್ಮಕಲ್ಯಾಣದಿಂದ ವಿಶ್ವ ಕಲ್ಯಾಣವನ್ನು ಮಾಡಿದ ಬಸವಣ್ಣ, ಬೆಳಕಿನಿಂದ ಮಹಾಬೆಳಕಿನ ಕಡೆಗೆ ಸಾಗಿದ ಜಗಜ್ಯೋತಿ ಎಂಬುದನ್ನು ಈ ಶತಮಾನೋತ್ಸವದ ಸಂದರ್ಭದಲ್ಲಿ ನೆನಪಿಸಿಕೊಳ್ಳಬೇಕಾಗುತ್ತದೆ. ಸಮಾಜ ಕಲ್ಯಾಣಕ್ಕಾಗಿ ದುಡಿದಂತಹ ಅಂತಹ ಮಹಾನುಭಾವರನ್ನು ನೆನೆಯುವುದೇ ಮುಕ್ತಿಪದಾ ಶಿವಾದವ ಅಂತ ಮಾಯಿದೇವನ ಮಾತನ್ನು ನೆನಪಿಸಿಕೊಳ್ಳಬೇಕಾಗುತ್ತದೆ. ಅವರನ್ನು ನೆನಸಿಕೊಂಡರೆ ನಮ್ಮನ್ನು ಈ ಬದುಕಿನ ಜಂಜಡದಿಂದ ಮುಕ್ತಿಗೊಳಿಸಿಕೊಂಡಂತೆ. ಇಲ್ಲಿ ಈ ನೆಲದ ಭಾಷೆಯನ್ನು ಬಹಳ ಶಕ್ತಿಯಾಗಿ ಬಳಸಿದಂತವ ಬಸವಣ್ಣ. ಯಾವ ಸಂದರ್ಭದಲ್ಲಿ ಸಂಸ್ಕೃತ ಭಾಷೆ ಜನರ ಉದ್ಧಾರವನ್ನು ಮಾಡುವಲ್ಲಿ ಅಸಮರ್ಥವಾಯಿತೋ ಆ ಸಂದರ್ಭದಲ್ಲಿ ಕನ್ನಡ ಭಾಷೆಯನ್ನು, ಈ ನೆಲದ ಭಾಷೆಯನ್ನು ದೇವಭಾಷೆಯ ಮಟ್ಟಕ್ಕೆ ಏರಿಸಿದ ಮಹಾತ್ಮ ಬಸವಣ್ಣ ಮತ್ತು ಆತನ ಜೊತೆಗಿರುವ ಶರಣರು ಎಂಬುದನ್ನು ಈ ಸ್ಮರಿಸಿಕೊಳ್ಳಬೇಕಾಗುತ್ತದೆ. ಬಸವಣ್ಣನ ವಚನಗಳನ್ನು ಗಮನಿಸಿ;

*ಹಾಡಿದೊಡೆ ಎನ್ನ ಒಡೆಯನ ಹಾಡುವೆ*
*ಕೂಡಸಂಗಮದೇವ ನಾನು ಒಲಿದಂತೆ ಹಾಡುವೆ ನಿನಗೆ ಕೇಡಿಲ್ಲವಾಗಿ.*

ಹೀಗೆಂದು ಆತ ಹೇಳುತ್ತಾನೆ. ಇಲ್ಲಿ ಆತನ ಸ್ವಧರ್ಮ ನಿಷ್ಠೆಯನ್ನು ಕಾಣುತ್ತೇವೆ. ನಿನಗೆ ಕೇಡಿಲ್ಲದವನಾಗಿ ಹಾಡುತ್ತೇವೆ ಎಂದು ಆತ ಹೇಳುತ್ತಾನೆ. ಶ್ರೇಷ್ಠ ವ್ಯಕ್ತಿಯಿಂದ ಆರಂಭಿಸಿ ಕಟ್ಟಕಡೆಯವನ ವರೆಗೆ ನ್ಯಾಯ ಸಿಗಬೇಕು ಎಂಬ ಪ್ರಯತ್ನವನ್ನು ಮಾಡಿದವ ಬಸವಣ್ಣ. ಒಬ್ಬ ವ್ಯಕ್ತಿ ಕರಣಿಕನಾಗಿ ಕೆಲಸಕ್ಕೆ ಸೇರಿಕೊಂಡು ಕಾರಣಿಕನಾಗಿ ಬೆಳೆದು ಜಗತ್ತಿಗೆ ಆದರ್ಶವನ್ನು ಹೇಳಿಕೊಂಡ ಕಾರಣಕ್ಕೆ ನಾವು ಇಲ್ಲಿ ನೋಡಬೇಕಾಗುತ್ತದೆ. ಬಸವಣ್ಣನವರ ತಾನುಗಳು ನೆಲದ ಮೇಲೆ ಇವೆ, ಆತನ ತಲೆ ಆಕಾಶದಲ್ಲಿದ್ದು ಬಹಳ ಎತ್ತರದ ವ್ಯಕ್ತಿಯಾಗಿದ್ದರೂ ಕೂಡ ಶ್ರೀಸಾಮಾನ್ಯನಾಗಿ ಬದುಕಿದ್ದ ಎಂಬುದನ್ನು ನಾವಿಲ್ಲಿ ನೆನಪಿಸಿಕೊಳ್ಳಬೇಕಾಗುತ್ತದೆ. ಒಬ್ಬ ಸಜ್ಜನಿಕೆಯ ಬದುಕನ್ನು ನಾವಿಲ್ಲಿ ನೆನಪಿಸಿಕೊಳ್ಳಬೇಕಾಗುತ್ತದೆ. ನಾವು ಹೇಗೆ ಬದುಕಬೇಕು ಎಂಬುದನ್ನು ನಾವು ಬಸವಣ್ಣನವರಿಂದ ಕಲಿಯಬೇಕಾಗುತ್ತದೆ.

ಸಕಲ ಜೀವಾತ್ಮರಿಗೆ ಲೇಸನ್ನು ಬಯಸುವವನೇ ಕುಲಜನು ಎಂಬ ಮಾತನ್ನು ಬಸವಣ್ಣ ಬಳಸುತ್ತಾನೆ. ಸರ್ವೇಜನ ಸುಖಿನೋಭವಂತು ಎಂಬುದರಿಂದ ಒಂದು ಹೆಜ್ಜೆ ಮುಂದೆ ಹೋಗಿ ಹೇಳಿದ ಮಾತಿದು. ಇಂತಹ ಉದಾತ್ತ ಚಿಂತನೆಗಳನ್ನು ನಮಗೆ ಕೊಟ್ಟಂತಹ ಬಸವಾದಿ ಶರಣರು ಅನೇಕ ಶತಮಾನಗಳು ಕಳೆದರೂ ಕೂಡ ನಮಗೆ ಆದರ್ಶಪ್ರಾಯವಾಗಿ ಉಳಿಯುತ್ತವೆ. ಪರಮಪೂಜ್ಯರು ಆರಂಭದಲ್ಲಿ ಹೇಳಿದ ಮಾತನ್ನು ಇಲ್ಲಿ ಮತ್ತೊಮ್ಮೆ ನೆನಪಿಸಿಕೊಳ್ಳಬೇಕಾಗುತ್ತದೆ.

*ಕಿರಿಯನಿತ್ತೊಡೆ ಒಳ್ಳೆ ಸಿರಿಯನಿತ್ತೊಡೆ ಒಳ್ಳೆ*
*ಹಿರಿದಪ್ಪ ರಾಜ್ಯವನಿತ್ತೊಡೆ ಒಳ್ಳೆ*
*ನಿಮ್ಮ ಶರಣರ ಸೂಳ್ನುಡಿಗಳನು*
*ಅರಗಳಿಗೆಯಿತ್ತೊಡೆ ನಿಮ್ಮನಿತ್ತೇ ರಾಮನಾಥ*

ಇಂತಹ ವಚನಗಳು ನಮ್ಮಿಂದ ದೂರಾಗುತ್ತಿದ್ದವೆ. ಇಂತಹ ವಚನಗಳನ್ನು ನಾವು ಅಧ್ಯಯನ ಮಾಡುವುದರಿಂದ ನಮ್ಮ ಬದುಕನ್ನು ನಾವು ಸಹ್ಯಗೊಳಿಸಿಕೊಳ್ಳಬಹುದು, ಸುಂದರಗೊಳಿಸಿ ಕೊಳ್ಳಬಹುದು. ಅಷ್ಟೇ ಅಲ್ಲ ಬದುಕಿನಲ್ಲಿ ಆತ್ಮವಿಶ್ವಾಸವನ್ನು ಬೆಳೆಸಿಕೊಳ್ಳಬಹುದು. ಅಕ್ಕನ ವಚನವನ್ನು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ;

*ಮುತ್ತು ಹುಟ್ಟಿತ್ತು ನೀರಿನಲ್ಲಿ*
*ಉಪ್ಪು ಹುಟ್ಟಿತ್ತು ನೀರಿನಲ್ಲಿ*
*ಉಪ್ಪು ಕರಗಿದುದ ಕಂಡೆ*
*ಆಲಿಕಲ್ಲು ಹುಟ್ಟಿತ್ತು ನೀರಿನಲ್ಲಿ*
*ಆಲಿಕಲ್ಲು ಕರಗಿದುದ ಕಂಡೆ*
*ಆದರೆ ನೀರಿನಲ್ಲಿ ಹುಟ್ಟಿದ ಮುತ್ತು*
*ಕರಗದೇ ಇರುವುದನ್ನು ಕಂಡೆ*

ಅಂತಹ ಅದ್ಭುತ ವ್ಯಕ್ತಿ ಬಸವಣ್ಣ. ಇವತ್ತು ನಮ್ಮ ಜೊತೆಗೆ ಇರುವವರು ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ❑



# ಮಾನವ ಧರ್ಮವೊಂದೇ ಶ್ರೇಷ್ಠ - ಅದರ ಪರಿಪಾಲನೆ ಮಾಡಿದರೆ ಶಾಂತಿ ಸಾಧ್ಯ

- ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಿದ್ಧಗಂಗಾ ಮಠ

ಮಾತೆಯರೆ ಹಾಗೂ ಮಹನೀಯರೆ,

ಇಲ್ಲಿ ಅನೇಕರು ಪ್ರಾಜ್ಞರಿದ್ದೀರಿ, ಬಲ್ಲವರಾಗಿದ್ದೀರಿ, ಜೀವನವನ್ನು ಅರ್ಥ ಮಾಡಿಕೊಂಡವರಾಗಿದ್ದೀರಿ. ನೀವು ಎಲ್ಲ ವಿಷಯ ತಿಳಿದುಕೊಂಡಿರುವುದರಿಂದ ಹೆಚ್ಚು ಮಾತಿನ ಅವಶ್ಯಕತೆ ಕಾಣುವುದಿಲ್ಲ. ಆದರೆ, ಧರ್ಮ, ಧರ್ಮ ಎಂದು ಒಂದೇ ಶಬ್ದ ಪ್ರಯೋಗ ಮಾಡುತ್ತಿದ್ದಾರೆ. ಧರ್ಮ ಬೇಕು ಅಂತ ಹೇಳ್ತಾ ಇದ್ದಾರೆ, ಧರ್ಮವನ್ನು ಉಳಿಸಬೇಕು ಬೆಳೆಸಬೇಕು ಎಂದು ಹೇಳ್ತಾ ಇದ್ದಾರೆ. ಅತ್ಯಂತ ಉತ್ತಮ ವಿಚಾರಗಳು ನಿಮ್ಮಲ್ಲಿ ಉಂಟು. ಧರ್ಮದಲ್ಲಿ ಇಸ್ಲಾಂ ಧರ್ಮ, ಕ್ರೈಸ್ತ ಧರ್ಮ, ಬೌದ್ಧ ಧರ್ಮ, ಜೈನ ಧರ್ಮ ಹೀಗೆ ವಿವಿಧ ಧರ್ಮಗಳಿವೆ. ನೀವೆಲ್ಲ ಏನು ಉಪಯೋಗ ಮಾಡುತ್ತಾ ಇದ್ದೀರಿ, ಮಾತನಾಡುತ್ತಾ ಇದ್ದೀರಿ, ಇದರ ವ್ಯವಹಾರ ಮಾಡುತ್ತಾ ಇದ್ದೀರಿ. ಇದರ ರಹಸ್ಯ ಏನು, ತತ್ವ ಏನು ಎಂಬುದನ್ನು ತಿಳಿದುಕೊಳ್ಳಬೇಕಾಗಿದೆ. ದೊಡ್ಡವರ ಅಭಿಪ್ರಾಯ, ಹಿರಿಯರ ಆಶೀರ್ವಾದ ಮನುಷ್ಯ ಧರ್ಮ ರೀತಿಯಾಗಿ ಜೀವನ ಮಾಡಬೇಕು. ಧರ್ಮ ಪರಿಪಾಲನೆಯನ್ನು ಮಾಡಬೇಕು. ಇದೆಲ್ಲದರ ಸಾರಾಂಶವನ್ನು ನೋಡಿದರೆ ಧರ್ಮ ಶಬ್ದ ಅನ್ನುವಂತಾದ್ದು ಇನ್ನೂ ಸಂಪೂರ್ಣವಾಗಿ ನಮಗೆ ಅರ್ಥವಾಗಿಯೇ ಇಲ್ಲ. ಒಂದು ಮಾತ್ರ ಇಲ್ಲಿ ಸ್ಪಷ್ಟವಾಗುವಂತಾದ್ದು. ಏನೆಂದರೆ ಪ್ರಪಂಚದಲ್ಲಿ ಒಂದು ಮಹಾಶಕ್ತಿ ಇದೆ. ಮಹಾತೇಜಸ್ಸು ಇದೆ ಎನ್ನುವಂತಾ ವಿಚಾರ. ಮೊನ್ನೆತಾನೆ ಒಂದು ಪುಸ್ತಕ ಓದುತ್ತಾ ಇದ್ದೆ; ಮನುಷ್ಯ ಮುಂದುವರಿಯುತ್ತಿದ್ದಾನೆ, ವಿಜ್ಞಾನಯುಗವಿದು ಎಂಬುದನ್ನು ಒಪ್ಪಿಕೊಳ್ಳತಕ್ಕ ವಿಷಯ. ನಾವು ಎಷ್ಟೇ ಹೊಸ ವಿಷಯಗಳನ್ನು ತಿಳಿದುಕೊಂಡಿರಲಿ, ಪ್ರಯೋಗ ಮಾಡುತ್ತಿರಲಿ, ಆಚರಣೆ ಮಾಡುತ್ತಾ ಇರಲಿ, ಯಾವುದೋ ಒಂದು ಶಕ್ತಿಯುಂಟು, ತೇಜಸ್ಸು ಉಂಟು, ಅತೀತವಾದ್ದು ಉಂಟು ಎನ್ನುವಂತಾದ್ದು. ಮನುಷ್ಯ ಅನ್ನುವಂತಾ ಶ್ರೇಷ್ಠವಾದ ಪ್ರಾಣಿ, ಎಲ್ಲವನ್ನೂ ಬಲ್ಲವನು ಎಂದು ಹೇಳತಕ್ಕಂತವನು, ಎಲ್ಲ ತಿಳಿದುಕೊಳ್ಳುತ್ತಿರುವವನು, ಸಾಧನೆ ಮಾಡುತ್ತಿರುವವನು, ವ್ಯವಹಾರ ಮಾಡುತ್ತಾ ಇರುವವನು, ಕಲಿತುಕೊಳ್ಳುತ್ತಾ ಇರುವವನು, ಬುದ್ಧಿವಂತನಾಗಿರುವವನು ತೀರ್ಮಾನ ಮಾಡುವ ವಿಷಯ ಏನೆಂದರೆ ಮತ್ತೊಂದು ಶಕ್ತಿಯುಂಟು ಅನ್ನುವಂತಾದ್ದು. ಮಹಾತೇಜಸ್ಸು ಉಂಟು ಎನ್ನುವಂತಾದ್ದು ಖಂಡಿತವಾಗಿರುವ ವಿಷಯ. ಅದನ್ನೇ ನಾವು ಧರ್ಮ ಎನ್ನುವಂತಾದ್ದು. ಯಾವ ತೇಜಸ್ಸು ಅಪೂರ್ವವಾಗಿರುವಂತಾದ್ದನ್ನೇ ಧರ್ಮ ಎಂದು ಕರೆಯುತ್ತಿರುವುದು. ಸ್ಥೂಲವಾಗಿ ಹೇಳಬೇಕೆಂದರೆ ದೇವರು ಅಂತಾ ಇದ್ದಾನೆ. ದೇವರು ಎಲ್ಲಿದ್ದಾನೆ ಎನ್ನುವ ಪ್ರಶ್ನೆಯನ್ನು ನಾವು ಸಂಪೂರ್ಣವಾಗಿ ಒಪ್ಪತಕ್ಕಂತ ವಿಚಾರವಲ್ಲ. ಒಂದು ಮಹಾತೇಜಸ್ಸು ಇದೆ ಎಂಬುದರ ಬಗ್ಗೆ ಚಿಂತನೆ ಮಾಡುವ ಶಕ್ತಿ ಇರುವುದು ಮನುಷ್ಯನಿಗೆ ಮಾತ್ರ. ಮನುಷ್ಯ ಎಲ್ಲ ವ್ಯವಹಾರ ಮಾಡುತ್ತಾ ಇದ್ದಾನೆ, ಎಲ್ಲವನ್ನೂ ಸಾಧನೆ ಮಾಡುತ್ತಾ ಇದ್ದಾನೆ, ಮನುಷ್ಯ ತಾನು ಹಣ ಸಂಪಾದನೆ ಮಾಡಬೇಕು, ಆಸ್ತಿ ಸಂಪಾದನೆ ಮಾಡಬೇಕು, ಅಧಿಕಾರವನ್ನು ಗಳಿಸಬೇಕು ಎಂಬ ಪ್ರಯತ್ನ ಮಾಡುತ್ತಿದ್ದಾನೆ. ಹಣ ಸಂಪಾದನೆ ಮಾಡುವವನು ಶ್ರೀಮಂತ ಅನಿಸಿಕೊಳ್ಳತ್ತಾ ಇದ್ದಾನೆ, ಹಣ ಮತ್ತು ಅಧಿಕಾರವನ್ನು ಮುಖ್ಯ ಸಾಧನೆಯನ್ನಾಗಿ ಮಾಡಿಕೊಳ್ಳುವ ಭರದಲ್ಲಿ ಮನುಷ್ಯ ವಿಫಲನಾಗುತ್ತಿದ್ದಾನೆ. ಇದು ವ್ಯಕ್ತಿ ಜೀವನದಲ್ಲಿ ಉಂಟು, ಗುಂಪು ಜೀವನದಲ್ಲಿ ಉಂಟು, ರಾಜಕೀಯ ಜೀವನದಲ್ಲಿ ಉಂಟು ಎನ್ನುವಂತಾದ್ದು ಮುಖ್ಯವಾಗಿರುವ ವಿಚಾರ. ಇದೆಲ್ಲದರ ನಡುವೆ ಮನುಷ್ಯ ತಾನು ಏತಕ್ಕಾಗಿ ಜೀವಿಸಬೇಕು ಎನ್ನುವಂತಾದ್ದು ಮಾತ್ರ ಅರ್ಥವಾಗುತ್ತಾ ಇಲ್ಲ. ಇದರ ಬಗ್ಗೆ ಪರಿಪೂರ್ಣವಾದ ಚಿಂತನೆ ಮಾಡಲು ಆತನಿಗೆ ಸಾಧ್ಯವಾಗಿಲ್ಲ. ಅದಕ್ಕೋಸ್ಕರ ಮನುಷ್ಯ ಜೀವಕೋಟಿಯಲ್ಲಿ ಮೊದಲನೇ ಸ್ಥಾನವನ್ನು ಪಡೆದಿರುವಂತಹ ಪ್ರಾಣಿ. ಹಾಗಾಗಿ ಆತ ಚಿಂತನೆ ಮಾಡಬೇಕಾದ ಅವಶ್ಯಕತೆಯಿದೆ. ಹೀಗೆ ಚಿಂತನೆ ಮಾಡುವ ಸಾಮರ್ಥ್ಯವುಳ್ಳ ಮನುಷ್ಯ ಧರ್ಮವನ್ನು ಕಾಪಾಡಬೇಕು.

ಹಾಗಾಗಿ ಎಲ್ಲವನ್ನೂ ಪರಿಶೀಲನೆ ಮಾಡಿದ ಮೇಲೆ ಮಹಾ ಮಹಾ ಮೇಧಾವಿಗಳು, ಪ್ರಾಜ್ಞರು, ಮಹಾಪುರುಷರು, ಜ್ಞಾನಿಗಳು





ಹೇಳುತ್ತಿರುವುದು ಏನೆಂದರೆ ಮನುಷ್ಯನಿಗೆ ಧರ್ಮ ಬೇಕು ಎಂದು. ಧರ್ಮ ಎಂದರೆ ಅದೊಂದು ಜೀವನದ ವ್ಯವಸ್ಥೆ, ಜೀವನ ಕ್ರಮವದು. ಮನುಷ್ಯ ಜೀವನ ಮಾಡುವಾಗ ಹೇಗೆ ಬಾಳ್ವಿಕೆ ಮಾಡಬೇಕು ಎಂಬುದನ್ನು ಅದು ಹೇಳುತ್ತದೆ. ಹೀಗಾಗಿ, ಧರ್ಮ ಪರಿಪೂರ್ಣವಾಗಿರುವಂತಾದ್ದು ಮತ್ತು ಅದರಲ್ಲಿ ಶಕ್ತಿಯೊಂದಿದೆ. ಪ್ರಪಂಚದಲ್ಲಿ ಅದಕ್ಕೆ ಶಬ್ದ ಬೇರೆ ಇರಬಹುದು. ಅದು ನೆಲೆ ಕಳಕೊಂಡಿರಬಹುದು, ತಿಳಕೊಳ್ಳುವಂತಹಾ ತಿಳುವಳಿಕೆ ಬೇರೆಯಾಗಿರಬಹುದು. ಆದರೆ, ಅದರಿಂದ ಮಹಾತೇಜಸ್ಸು ಇರುವುದು ಮಾತ್ರ ನಿಜ. ಅದನ್ನು ಮನುಷ್ಯ ಒಪ್ಪಿಕೊಳ್ಳಬೇಕು. ಆ ತತ್ವಕ್ಕೆ ಆತ ಬದ್ಧನಾದಾಗ, ಅದನ್ನು ಒಪ್ಪಿಕೊಂಡಾಗ, ಚಿಂತನೆ ಮಾಡಿದಾಗ ಮನುಷ್ಯ ಹೇಗೆ ಜೀವನ ಮಾಡಬೇಕು ಎಂಬುದು ಅರ್ಥವಾಗುತ್ತದೆ. ಈ ಕಾರಣದಿಂದಾಗಿ ವ್ಯಾಪಕ ಅರ್ಥವನ್ನು ಹೊಂದಿರುವ ಧರ್ಮವನ್ನು ಆತ ಅರ್ಥ ಮಾಡಿಕೊಳ್ಳಬೇಕು. ಧರ್ಮದ ಪರಿಪಾಲನೆ ಮಾಡಬೇಕು, ಧರ್ಮವನ್ನು ಉಳಿಸಬೇಕು ಎಂಬ ತೀರ್ಮಾನಕ್ಕೆ ಮನುಷ್ಯ ಈಗಾಗಲೇ ಬಂದುಬಿಟ್ಟಿದ್ದಾನೆ. ಧರ್ಮರೀತಿಯ ತತ್ವವನ್ನು ಮನುಷ್ಯ ಪರಿಪಾಲನೆ ಮಾಡಿದಾಗ, ಅನುಸರಿಸಿಕೊಂಡು ಹೋದಾಗ ಜೀವಿತದಲ್ಲಿ ಒಳ್ಳೆಯ ಬಾಳ್ವಿಕೆಯನ್ನು ಮಾಡುವ ಅವಕಾಶ ಅವನಿಗೆ ಲಭ್ಯವಾಗುತ್ತದೆ. ಜೀವನದ ತತ್ವ ಅರ್ಥವಾಗುತ್ತದೆ ಅವನಿಗೆ. ಈ ಕಾರಣವಾಗಿ ಮನುಷ್ಯ ಮಾನವನಾಗಿಯೇ ಬಾಳ್ವಿಕೆ ಮಾಡಬೇಕು ಎನ್ನುವ ತತ್ವವಿದು. ಯಾವುದು ಚೆನ್ನಾಗಿ ಬೋಧನೆ ಮಾಡುತ್ತಿದ್ದಾರೋ ಅದನ್ನು ಧರ್ಮ ಎಂದು ಕರೆಯುತ್ತಾ ಇದ್ದಾರೆ.

ಮನುಷ್ಯನಿಗೆ ಹೊಟ್ಟೆತುಂಬಾ ಅನ್ನಬೇಕು, ಮೈತುಂಬಾ ಬಟ್ಟೆಬೇಕು. ಈ ಪ್ರಕಾರವಾಗಿ ಮನುಷ್ಯನ ಜೀವನದಲ್ಲಿ ಅವನ ಒಂದು ಆಚರಣೆಯಲ್ಲಿ, ಅವನ ವ್ಯವಹಾರಗಳಲ್ಲಿ, ಯಾವುದು ಅತ್ಯುತ್ತಮವಾಗಿರುವ ಮಾರ್ಗವನ್ನು ಬೋಧ ಮಾಡುತ್ತಾ ಇದೆಯೋ ಅದನ್ನು ಧರ್ಮದ ಪರಿಪಾಲನೆ ಎನ್ನುವಂತಾದ್ದು. ನಮ್ಮಲ್ಲಿ ಅನೇಕ ಧರ್ಮಗಳು ಉಂಟು, ಆಚರಣೆಯುಂಟು. ಮಾರ್ಗಗಳೂ ಉಂಟು. ಧರ್ಮವನ್ನು ಪರಿಪೂರ್ಣವಾಗಿ ಪರಿಪಾಲನೆ ಮಾಡಲು ಆರಂಭಿಸಿದಾಗ ಶಾಂತಿ ನೆಲೆಸುತ್ತದೆ. ಒಂದು ವ್ಯವಸ್ಥೆ ನಿರ್ಮಾಣವಾಗುತ್ತದೆ. ಮನುಷ್ಯ ಜೀವನದಲ್ಲಿ ಎಲ್ಲವನ್ನು ಪಡೆಯುತ್ತಾನೆ. ಧರ್ಮ ಅನ್ನುವಂತಾದ್ದು ಸುಖ-ಶಾಂತಿಯ ತತ್ವ. ಮನುಷ್ಯ ತಾಳ್ಮೆಯಿಂದ ಇರಬೇಕು, ಸಮಾಧಾನವಾಗಿರಬೇಕು. ಮನುಷ್ಯನ ಜೀವನದಲ್ಲಿ ಯಾವುದು ತತ್ವ, ಸುಖ-ಶಾಂತಿ ಇರುತ್ತದೋ ಅದನ್ನೇ ನಾವು ಧರ್ಮ ಎನ್ನುವಂತಾದ್ದು. ಒಟ್ಟಿನಲ್ಲಿ ಧರ್ಮದ ಸಾರಾಂಶ ಎಂದರೆ ಮಹಾನ್ ಶಕ್ತಿ ಇದೆ ಎಂಬುದನ್ನು ಒಪ್ಪಿಕೊಂಡು ಜೀವನ ಮಾಡುವಂತಾದ್ದು. ಮಹಾ ತೇಜಸ್ಸು ಇದೆ ಎಂದು ಒಪ್ಪಿಕೊಂಡು ಸಾಗಿದಾಗ ಜೀವನಕ್ಕೆ ಹಲವಾರು ಮಾರ್ಗಗಳು ಕಾಣುತ್ತವೆ. ಮನುಷ್ಯ ಜೀವನವನ್ನು ಸಂಪೂರ್ಣವಾಗಿ ಅರ್ಥ ಮಾಡಿಕೊಂಡಿಲ್ಲ, ಸ್ವಾರ್ಥಿಯಾಗಿ ಬದುಕುತ್ತಿದ್ದಾನೆ. ಸ್ವಾರ್ಥಿಯಾಗಿ ಬದುಕುತ್ತಿರುವ ಇಂತಹ ಸಂದರ್ಭದಲ್ಲಿ ಮನುಷ್ಯ ತಪ್ಪುಗಳನ್ನು ಮಾಡುತ್ತಾ ಹೋಗುತ್ತಿದ್ದಾನೆ. ಈ ಸ್ವಾರ್ಥದ ಫಲವಾಗಿಯೇ ಮೊದಲನೇ ಮಹಾ ಯುದ್ಧ ನಡೆದಿದ್ದು. ದೇಶ ಬಾರೀ ನಷ್ಟವನ್ನು ಅನುಭವಿಸಿತು. ಅದಾದ ಬಳಿಕ ಎರಡನೇ ಮಹಾಯುದ್ಧವಾಯಿತು. ಆಗಲೂ ಅಪಾರವಾದ ನಷ್ಟವುಂಟಾಯಿತು. ಅಷ್ಟಾದರೂ ನಮ್ಮ ಸ್ವಾರ್ಥ ನಿಂತಿಲ್ಲ. ದಿನನಿತ್ಯದ ಜೀವನದಲ್ಲೂ ನಾವು ಹಿತವನ್ನು ಕಾಣುತ್ತಿಲ್ಲ. ಯಾರಿಗೂ ನೆಮ್ಮದಿ ಇಲ್ಲ, ಶಾಂತಿಯಿಲ್ಲ. ಅದಕ್ಕೋಸ್ಕರವಾಗಿ ಧರ್ಮ ಪರಿಪಾಲನೆ ಮಾಡಲು ಬದ್ಧವಾದಾಗ, ಧರ್ಮವನ್ನು ಅರ್ಥ ಮಾಡಿಕೊಂಡಾಗ ಮನುಷ್ಯ ಬಾಳ್ವಿಕೆ ಮಾಡುವುದು ಸುಲಭವಾಗುತ್ತದೆ.

ನಮ್ಮಲ್ಲಿ ಬೇರೆ ಬೇರೆ ಧರ್ಮಗಳುಂಟು. ಆದರೆ, ಮಾನವಧರ್ಮ ಬಹುಮುಖ್ಯವಾದುದು. ಮನುಷ್ಯ ಮಾನವಧರ್ಮದಂತೆ ಬಾಳ್ವಿಕೆ ಮಾಡಲು ಬದ್ಧವಾಗಿರಬೇಕು. ಅಂತಹ ಆಚರಣೆಗಳನ್ನು ಮಾಡಬೇಕು. ಮಾನವಧರ್ಮ ಪರಿಪಾಲನೆ ಮಾಡುವ ಪ್ರಜ್ಞೆ ಜಾಸ್ತಿಯಾದಾಗ, ತಿಳುವಳಿಕೆ ಉಂಟಾದಾಗ ಶಾಂತಿ ನೆಲೆಸುತ್ತದೆ, ಸುಖ ಉಂಟಾಗುತ್ತದೆ. ಮನುಷ್ಯ ಧರ್ಮ ಪರಿಪಾಲನೆ ಮಾಡುತ್ತಿಲ್ಲ, ಸ್ವಾರ್ಥ ಜಾಸ್ತಿಯಾಗಿದೆ, ತಪ್ಪು ಮಾರ್ಗದಲ್ಲಿ ಸಾಗುತ್ತಿದ್ದಾನೆ, ಅದರಿಂದಾಗಿ ಅಶಾಂತಿ ನೆಲೆಸುತ್ತಾ ಇದೆ, ಕದನವಾಗುತ್ತಾ ಇದೆ, ಗೊಂದಲ ಉಂಟಾಗುತ್ತಾ ಇದೆ ಎಂಬದನ್ನು ಅರ್ಥ ಮಾಡಿಕೊಳ್ಳಬೇಕು. ಒಂದು ಸ್ಥೂಲವಾಗಿ ಹೇಳುವುದಾದರೆ, ನಾವೆಲ್ಲ ಇಂದು ಧರ್ಮವನ್ನು ಅರ್ಥ ಮಾಡಿಕೊಂಡು, ಧರ್ಮವನ್ನು ಪರಿಪಾಲನೆ ಮಾಡಲು ಮುಂದಾದಾಗ ಇಡೀ ಜೀವನದಲ್ಲಿ ಸುಖ ಶಾಂತಿ ನೆಲೆಸುತ್ತದೆ. ಇವತ್ತಿನ ಪ್ರಪಂಚವನ್ನು ನಾವು ನೋಡಿದಾಗ ಮನುಷ್ಯ ಜೀವನವನ್ನು ಅರ್ಥ ಮಾಡಿಕೊಳ್ಳುವಲ್ಲಿ ವಿಫಲನಾಗಿದ್ದಾನೆ. ಅದನ್ನು ಅರ್ಥ ಮಾಡಿಕೊಳ್ಳುವುದೇ ಮನುಷ್ಯನಿಗೆ ಕಷ್ಟವಾಗಿದೆ. ಮನುಷ್ಯ ಅಧಿಕಾರದ ಗುಲಾಮನಾಗಿದ್ದಾನೆ. ಮಾಡಬಾರದ್ದನ್ನು ಮಾಡುತ್ತಾ ಇದ್ದಾನೆ. ನಮಗೆ ಎಲ್ಲೆಲ್ಲೂ ಕಾಣುತ್ತಾ ಇರುವುದು ಅಶಾಂತಿ ಮತ್ತು ಅಸಮಾಧಾನ. ಇದೆಲ್ಲ ಪರಿಹಾರ ಕಾಣಬೇಕಾದರೆ ಮನುಷ್ಯ ಧರ್ಮವನ್ನು ಪರಿಪಾಲನೆ ಮಾಡಬೇಕು. ಜೀವನವನ್ನು ಸ್ವಲ್ಪವಾದರೂ

ಅರ್ಥ ಮಾಡಿಕೊಳ್ಳಬೇಕು ಅವನು. ಆ ಪ್ರಕಾರವಾಗಿಯೇ ಮನುಷ್ಯನಲ್ಲಿ ಜಾಗೃತಿಯನ್ನು ಉಂಟುಮಾಡುವ ಪ್ರಯತ್ನವನ್ನು ಮಾಡಲಾಗುತ್ತಿದೆ.

ಇವತ್ತು ಧರ್ಮ ಎಂದರೆ ಜಾತಿಯನ್ನಾಗಿ ಮಾಡಿಕೊಂಡಿದ್ದಾರೆ, ಸಂಪ್ರದಾಯವನ್ನಾಗಿ ಮಾಡಿಕೊಂಡಿದ್ದಾರೆ. ಧರ್ಮ ಎಂದರೆ ಜಾತಿಯಲ್ಲ. ತಾವು ಮಾತ್ರ ಉತ್ತಮ ಎಂದು ತಿಳಿದುಕೊಳ್ಳುವುದಲ್ಲ. ಧರ್ಮವನ್ನು ಪರಿಪಾಲನೆ ಮಾಡಿಕೊಂಡರೆ, ಅರ್ಥ ಮಾಡಿಕೊಂಡರೆ ಗೊಂದಲಕ್ಕೆ ಅವಕಾಶವೇ ಇಲ್ಲ. ಅಸಮಾಧಾನ ಉಂಟಾಗುವುದಿಲ್ಲ, ಜಗಳ ಮಾಡಿಕೊಳ್ಳುವ ಪ್ರಶ್ನೆ ಬರುವುದಿಲ್ಲ. ಧರ್ಮ ಅರ್ಥ ಪರಿಪಾಲನೆ ಮಾಡುವಂತಹ ಪ್ರಯತ್ನ ಮಾಡಬೇಕು. ಪರಮಾತ್ಮ ಇದ್ದಾನೆ, ಮಹಾ ತೇಜಸ್ಸು ಇದೆ ಎಂಬುದನ್ನು ಅರ್ಥ ಮಾಡಿಕೊಂಡು ಜೀವನ ಮಾಡಬೇಕು. ಮಾನವ ಧರ್ಮಕ್ಕೆ ತಕ್ಕಂತೆ ನಡೆದಾಗ ಎಲ್ಲವೂ ಪರಿಹಾರ ಕಾಣುತ್ತದೆ. ಮಾನವ ಧರ್ಮವನ್ನು ಆಚರಣೆ ಮಾಡಿದಾಗ ಎಲ್ಲ ಗೊಂದಲವೂ ನಿವಾರಣೆಯಾಗುತ್ತದೆ. ಮೊದ ಮೊದಲು ಹಾಗಿರಲಿಲ್ಲ, ವಿದ್ಯಾವಂತರ ಸಂಖ್ಯೆ ಕಡಿಮೆ ಇತ್ತು, ತಿಳುವಳಿಕೆ ಮಾಡುವ ಅವಕಾಶವಿರಲಿಲ್ಲ. ಆದರೆ ಜೀವನದಲ್ಲಿ ತತ್ವ ಎನ್ನುವಂತಾದ್ದು ಇತ್ತು. ಇದನ್ನು ಪರಿಪಾಲನೆ ಮಾಡುವಂತಹ ಅನುಭವ ಉಳ್ಳವರು ಇದ್ದರು. ದ್ವೇಷಾಸೂಯೆಗಳು ಜಾಸ್ತಿಯಾಗಿರಲಿಲ್ಲ. ಸಮಾನತೆ ಇತ್ತು. ಇವತ್ತು ತಿಳುವಳಿಕೆ ಜಾಸ್ತಿಯಾಗಿದ್ದರೂ ಆ ರೀತಿಯಾದ ಪರಿವರ್ತನೆ ಕಾಣುತ್ತಾ ಇಲ್ಲ. ಹಾಗಾಗಿ ನಾವೆಲ್ಲ ಧರ್ಮವನ್ನು ಅರ್ಥ ಮಾಡಿಕೊಳ್ಳುವಂತಹ ಪ್ರಯತ್ನವನ್ನು ಮಾಡಬೇಕು. ಸ್ವಾರ್ಥ ಭಾವನೆ ಹೋಗಬೇಕು. ದುರಾಸೆ ಹೋಗಬೇಕು. ಎಲ್ಲರಿಗೂ ಸುಖ ಬೇಕು ಎಂಬ ಭಾವನೆ ಬರಬೇಕು. ಮಹಾ ತೇಜಸ್ಸು ಇದೆ ಎಂಬ ನಂಬಿಕೆಯಲ್ಲಿ ಮುನ್ನಡೆಯಬೇಕು. ಎಲ್ಲ ಮಹಾನುಭಾವರು ಹೇಳಿದಂತೆ ಮಾನವ ಧರ್ಮವನ್ನು ಪರಿಪಾಲನೆ ಮಾಡಿಕೊಂಡು ಹೋಗಬೇಕು. ಇದಕ್ಕೆ ಸಂಬಂಧಪಟ್ಟಂತೆ ವಿದ್ವಾಂಸರು ಸಾಕಷ್ಟು ವಿಚಾರಗಳನ್ನು ಕೂಡ ಹೇಳಿದ್ದಾರೆ. ಪ್ರಪಂಚದಲ್ಲಿ ಶಾಂತಿ ಸಮಾಧಾನ ಉಂಟಾಗಲಿ ಎಂದು ಹಾರೈಸುತ್ತಿದ್ದೇನೆ.

(ಪರಮಪೂಜ್ಯ ಶ್ರೀ ಶ್ರೀಗಳವರು ಧಾರ್ಮಿಕ ಸಮ್ಮೇಳನದಲ್ಲಿ ಮಾಡಿದ ಆಶೀರ್ವಚನ) ❑

## ಶ್ರೀವಾಣಿ

*ಇತ್ತೀಚಿನ ದಿನಮಾನಗಳಲ್ಲಿ ಉನ್ನತ ಸ್ಥಾನಗಳನ್ನು ಅಲಂಕರಿಸಿದವರ ನಡೆ-ನುಡಿಗಳನ್ನು ಗಮನಿಸಿದಾಗ ತುಂಬಾ ವಿಷಾದವಾಗುತ್ತದೆ. ಅವರಲ್ಲಿ ಇಬ್ಬಂದಿತನ ಎದ್ದು ಕಾಣುತ್ತದೆ. ಅವರ ಒಳ-ಹೊರಗುಗಳಲ್ಲಿ ಅಪಾರ ವ್ಯತ್ಯಾಸವಿರುವುದು ತಿಳಿಯುತ್ತದೆ. ಎಲ್ಲರೂ ಆಡುವ ಮಾತು ಸಾರ್ವಜನಿಕ ಸೇವೆಯನ್ನೇ ಕುರಿತದ್ದಾಗಿರುತ್ತದೆ. ಆದರೆ ಆ ಮಾತಿನ ಒಳಗೆ ಸ್ವಾರ್ಥ ತುಂಬಿರುತ್ತದೆ. ಯೋಜನೆಗಳ ಮಹಾಪೂರವೇ ಹರಿದುಬರುತ್ತದೆ. ಉಪಯೋಗ ಮಾತ್ರ ಸಾರ್ವಜನಿಕರಿಗೆ ಸಲ್ಲುವುದು ನಗಣ್ಯ. ಒಂದು ಕಥೆ ನೆನಪಿಗೆ ಬರುತ್ತದೆ. ವಿನೋಬಾಭಾವೆ ಹೇಳುತ್ತಿದ್ದ ಕಥೆ ಹೀಗಿದೆ. ಒಂದೂರಿನಲ್ಲಿ ಒಬ್ಬ ಬಾವಿಯೊಂದನ್ನು ತೆಗೆಸುತ್ತಾನೆ. ಏತದ ಮೂಲಕ ತನ್ನ ಗದ್ದೆಗೆ ನೀರು ಹಾಯಿಸುವ ಪ್ರಯತ್ನ ಮಾಡುತ್ತಾನೆ. ಆದರೆ ಬಾವಿಯಿಂದ ಏತದ ಮೂಲಕ ಎತ್ತಿದ ನೀರನ್ನೆಲ್ಲಾ ಗದ್ದೆಗಾಗಿ ತೋಡಿದ ಕಾಲುವೆಯೇ ಕುಡಿದು ಬಿಡುತ್ತದೆ. ಗದ್ದೆಗೆ ನೀರೇ ಹರಿಯುವುದಿಲ್ಲ. ಹಾಗಾಗಿದೆ ಇಂದು ನಮ್ಮ ಸರ್ಕಾರಗಳು ರೂಪಿಸುತ್ತಿರುವ ಯೋಜನೆಗಳು. ಯೋಜನೆಗಳ ಫಲ ತಲುಪಬೇಕಾದವರಿಗೆ ತಲುಪುತ್ತಲೇ ಇಲ್ಲ. ತಲುಪಿದರೂ ಆ ಫಲದ ಪ್ರಮಾಣ ಅತ್ಯಲ್ಪ. ಕೋಟಿ ಕೋಟಿ ರೂಪಾಯಿಗಳು ಯೋಜನೆಗಳಿಗೆ ಖರ್ಚಾಗುತ್ತವೆ. ಆದರೆ ಶ್ರೀಸಾಮಾನ್ಯನಿಗೆ ತಲುಪುವುದು ಮಾತ್ರ ನೂರರ ಸಂಖ್ಯೆಯಾಗಿ. ಯೋಜಕರು, ಅಧಿಕಾರಿಗಳು, ಜನಪ್ರತಿನಿಧಿಗಳು, ಶುದ್ಧಹಸ್ತದವರಾಗದತನಕ ಯೋಜನೆಗಳು ಸಾರ್ಥಕವಾಗಲಾರವು. ಪತ್ರಿಕೆಗಳಲ್ಲಿ ಪ್ರಕಟವಾಗುವ ಅನೈತಿಕ ಮಾರ್ಗದಲ್ಲಿ ಸಂಗ್ರಹವಾಗುತ್ತಿರುವ ಹಣದ ಪ್ರಮಾಣವನ್ನು ಗಮನಿಸಿದಾಗ ಇದು ಆದರ್ಶ ಭಾರತವೇ ಎನ್ನುವ ಸಂದೇಹವುಂಟಾಗುತ್ತದೆ. ಇದನ್ನೆಲ್ಲಾ ನೋಡಿದಾಗ ನಮಗಿಂದು ಬೇಕಾಗಿರುವುದು ಶ್ರೀ ಲಾಲ್‌ಬಹದ್ದೂರು ಶಾಸ್ತ್ರಿಯವರಂಥ ಪ್ರಧಾನಮಂತ್ರಿಗಳು, ಡಾ॥ ಎ.ಪಿ.ಜೆ. ಅಬ್ದುಲ್ ಕಲಾಂರಂಥ ರಾಷ್ಟ್ರಪತಿಗಳು ಅನಿಸುತ್ತದೆ. ಪ್ರಾಮಾಣಿಕತೆ, ಸರಳತೆ, ನಿಸ್ವಾರ್ಥತೆಗಳನ್ನಿಂದು ಹುಡುಕಬೇಕಾಗಿದೆ.*







# ಡಾ॥ ಶಿವಕುಮಾರಸ್ವಾಮೀಜಿಗೆ ಗುರುವಂದನೆ ಭಕ್ತಿಯ ಶ್ರದ್ಧೆ, ಸಂತಸ, ಸಂಭ್ರಮ, ಸೊಗಸು...

ಅಲ್ಲಿ ಒಮ್ಮೆಗೆ ಸಾವಿರ ಸಾವಿರ ಹೃದಯಗಳು ಸಂತಸಪಟ್ಟವು. ಕಂಗಳಲ್ಲಿ ಒಮ್ಮೆಲೆ ಬೆಳಕಿನ ಮಿಂಚು. ವೇದಿಕೆಯಲ್ಲಿದ್ದ ಖಾವಿಧಾರಿ ಡಾ॥ ಶಿವಕುಮಾರಸ್ವಾಮೀಜಿ ಅವರನ್ನು ಕಣ್ತುಂಬ ತುಂಬಿಕೊಂಡರೂ ಮತ್ತೆ ಮತ್ತೆ ನೋಡುವ ಕಾತುರ. ಜೊತೆಗೆ ಯುಪಿಎ ಅಧ್ಯಕ್ಷೆ ಸೋನಿಯಾ ಗಾಂಧಿ ಆಕರ್ಷಣೆ. ಇಡೀ ಮಠದಲ್ಲಿ ಹಬ್ಬದ ವಾತಾವರಣ. ಜನಸಾಗರದಲ್ಲಿ ಮಿಂದು ಹೋದ ಸಿದ್ಧಗಂಗೆ.

ಇದು ಶನಿವಾರ ಡಾ॥ ಶಿವಕುಮಾರಸ್ವಾಮೀಜಿ ೧೦೫ ನೇ ಜನ್ಮದಿನಾಚರಣೆ ಹಾಗೂ ಗುರುವಂದನಾ ಕಾರ್ಯಕ್ರಮದಲ್ಲಿ ಸಿದ್ಧಗಂಗಾ ಮಠದ ಆವರಣದಲ್ಲಿ ಕಂಡ ಸಂತಸ, ಸಂಭ್ರಮದ ಕ್ಷಣಗಳು.

ಸೋನಿಯಾ ಗಾಂಧಿ ಪಾಲ್ಗೊಂಡ ಹಿನ್ನಲೆಯಲ್ಲಿ ಸಾಕಷ್ಟು ಭದ್ರತೆಯ ನಡುವೆ ಜನರು ಕಾರ್ಯಕ್ರಮದ ಸಭಾಂಗಣಕ್ಕೆ ಬರಬೇಕಾಯಿತು, ಸಭಾಂಗಣ ಪ್ರವೇಶಿಸುವ ಮುನ್ನ ಐದು ಬಾಗಿಲುಗಳಲ್ಲಿ ಲೋಹ ಶೋಧಕ ಅಳವಡಿಸಲಾಗಿತ್ತು. ಜನತೆ ಲೋಹ ಶೋಧಕ ಬಾಗಿಲು ಮೂಲಕ ಸಭಾಂಗಣ ಪ್ರವೇಶಿಸಿದರು.

ಸಭಾಂಗಣದಲ್ಲಿ ಹಾಕಲಾಗಿದ್ದ ಕುರ್ಚಿಗಳು ಸಾಲದೆ ಜನ ನಿಂತುಕೊಂಡೇ ಕಾರ್ಯಕ್ರಮ ವೀಕ್ಷಿಸಿದರು. ಸಭಾಂಗಣದ ಮಧ್ಯೆ ಟಿ.ವಿ. ಪರದೆ ಅಳವಡಿಸಲಾಗಿತ್ತು. ವೇದಿಕೆಯ ಗೋಡೆಗೂ ಟಿ.ವಿ. ಪರದೆ ಅಳವಡಿಸಲಾಗಿತ್ತು.

ಬೆಳಿಗ್ಗೆ ೧೧ ಗಂಟೆಗೆ ಕಾರ್ಯಕ್ರಮ ನಿಗದಿಯಾದರೂ ೪೦ ನಿಮಿಷ ತಡವಾಗಿ ಆರಂಭವಾಯಿತು. ವೇದಿಕೆಗೆ ಆಗಮಿಸುವ ಮುನ್ನ ಸೋನಿಯಾ ಗಾಂಧಿ ನೇರವಾಗಿ ಮಠಕ್ಕೆ ಭೇಟಿ ನೀಡಿ ಸ್ವಾಮೀಜಿಯಿಂದ ಆಶೀರ್ವಾದ ಪಡೆದರು.

ಸ್ವಾಮೀಜಿ ಜತೆ ಐದು ನಿಮಿಷ ಇದ್ದ ಸೋನಿಯಾ ಗಾಂಧಿ ನಂತರ ವೇದಿಕೆಗೆ ಆಗಮಿಸಿದರು. ಸ್ವಾಮೀಜಿ ಅವರ ೧೦೫ ವರ್ಷದ ನೆನಪಿಗೆ ೧೦೫ ದೀಪಗಳನ್ನು ಬೆಳಗುವ ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು.

ವೇದಿಕೆಯನ್ನು ವಿಶೇಷವಾಗಿ ವಿನ್ಯಾಸಗೊಳಿಸಲಾಗಿತ್ತು. ವೇದಿಕೆ ಮೇಲೆ ನಾಲ್ವರು ಸ್ವಾಮೀಜಿ ಹೊರತು ಪಡಿಸಿ ಬೇರೆ ಯಾರಿಗೂ ಅವಕಾಶ ಇರಲಿಲ್ಲ. ಅತ್ಯಂತ ಸೊಗಸಾಗಿ ಕಾರ್ಯಕ್ರಮ ನಡೆಯಿತು. ದಾಸೋಹ ಸಭಾಂಗಣದ ಜೊತೆಗೆ ನೂತನ ಪ್ರಾರ್ಥನಾ ಸಭಾಂಗಣದಲ್ಲೂ ಊಟದ ವ್ಯವಸ್ಥೆ ಮಾಡಲಾಗಿತ್ತು. ನೂರಾರು ಜನರು ಸ್ವಯಂಸೇವಕರಾಗಿ ನಿಂತು ಬಂದವರಿಗೆ ಊಟ ಬಡಿಸಿದರು. ಸ್ವಾಮೀಜಿ ದರ್ಶನಕ್ಕಾಗಿ ದೂರದ ಊರುಗಳಿಂದ ಬಂದ ಜನ ಶಾಂತವಾಗಿ ಕುಳಿತು ಸಮಾರಂಭ ವೀಕ್ಷಿಸಿದರು. ಎಲ್ಲಿಯೂ ಯಾವುದೇ ಗೊಂದವಲಿಲ್ಲದ ಅಚ್ಚುಕಟ್ಟು ವ್ಯವಸ್ಥೆ ಗಮನ ಸೆಳೆಯಿತು.

### *ಜವಾಬ್ದಾರಿ ಹೆಚ್ಚಿದೆ : ಸ್ವಾಮೀಜಿ*

ದೇಶ ಆರ್ಥಿಕವಾಗಿ, ವೈಜ್ಞಾನಿಕವಾಗಿ ಪ್ರಗತಿಯಾಗಿದೆ. ಆದರೂ ಬಡವರು, ಅನಕ್ಷರಸ್ಥರು ದೇಶದಲ್ಲಿ ಹೆಚ್ಚಿದ್ದು ಅವರ ಏಳ್ಗೆಗಾಗಿ ದುಡಿಯಬೇಕಾಗಿದೆ ಎಂದು ಡಾ॥ ಶಿವಕುಮಾರ ಸ್ವಾಮೀಜಿ ತಿಳಿಸಿದರು.

ಗುರುವಂದನಾ ಸಮಾರಂಭದಲ್ಲಿ ಆಶೀರ್ವಚನ ನೀಡಿದ ಅವರು, ದೇಶ ಅಭಿವೃದ್ಧಿಯಲ್ಲಿರುವುದು ಸತ್ಯ. ಆದರೆ ಭಾರತ ಏನು ಮಾಡುತ್ತದೆ, ಏನು ಹೇಳುತ್ತದೆ ಎಂಬುದನ್ನು ಪ್ರಪಂಚ ಕಾತರದಿಂದ ಕಾದು ನೋಡುತ್ತಿದ್ದು, ಜವಾಬ್ದಾರಿ ಹಿಂದಿಗಿಂತಲೂ ಇಂದು ಹೆಚ್ಚಿದೆ ಎಂಬುದನ್ನು ಪ್ರತಿಯೊಬ್ಬರು ಮನಗಾಣಬೇಕು ಎಂದರು. ಪ್ರತಿಯೊಬ್ಬರು ತಮ್ಮ ವೈಯಕ್ತಿಕ ಜವಾಬ್ದಾರಿ, ಹೊಣೆಗಾರಿಕೆ ಹೊರಬೇಕು. ದೇಶದ ಅಭಿವೃದ್ಧಿಗೆ ದುಡಿಯಬೇಕು. ನಾವೆಲ್ಲರೂ ಭಾರತೀಯರು ಎಂಬುದನ್ನು ಮನಗಾಣಬೇಕು ಎಂದು ಹೇಳಿದರು.

### *೧೦೫ ಲಕ್ಷ ಸಮರ್ಪಣೆ*

ಶಿವಕುಮಾರಸ್ವಾಮೀಜಿ ೧೦೫ ಜನ್ಮದಿನದ ನೆನಪಿನಲ್ಲಿ ರೂ. ೧೦೫ ಲಕ್ಷವನ್ನು ಸ್ವಾಮೀಜಿಗೆ ಸಮರ್ಪಣೆ ಮಾಡಲಾಯಿತು. ಕಾಂಗ್ರೆಸ್ ಮುಖಂಡ ಶ್ಯಾಮನೂರು ಶಿವಶಂಕರಪ್ಪ ಅವರು ನೀಡಿದ ಈ ಹಣವನ್ನು ಸೋನಿಯಾ ಗಾಂಧಿ ಮೂಲಕ ಸ್ವಾಮೀಜಿಗೆ ಅರ್ಪಿಸಲಾಯಿತು.

### *'ಮಠಗಳ ಶೈಕ್ಷಣಿಕ ಸಾಧನೆ ಜಗತ್ತಿಗೆ ಮಾದರಿ'- ಸೋನಿಯಾ ಗಾಂಧಿ*

ಮಠಮಾನ್ಯಗಳು ಎಲ್ಲ ಸಮುದಾಯದ ಜನವರ್ಗಕ್ಕೆ ಶಿಕ್ಷಣ ನೀಡುವ ಮೂಲಕ ಅಕ್ಷರ ಜ್ಯೋತಿಯನ್ನು ಬೆಳಗುತ್ತಿವೆ. ಶಿಕ್ಷಣ ಕ್ಷೇತ್ರದಲ್ಲಿ ಜಗತ್ತಿಗೆ ಮಾದರಿಯಾಗಿವೆ ಎಂದು ಎಐಸಿಸಿ ಹಾಗೂ ಯುಪಿಎ ಅಧ್ಯಕ್ಷೆ ಸೋನಿಯಾ ಗಾಂಧಿ ಶ್ಲಾಘಿಸಿದರು.

ಸಿದ್ಧಗಂಗಾ ಮಠದಲ್ಲಿ ಶನಿವಾರ ಏರ್ಪಡಿಸಿದ ಡಾ॥ ಶಿವಕುಮಾರಸ್ವಾಮೀಜಿ ೧೦೫ನೇ ಜಯಂತಿ ಹಾಗೂ ಗುರುವಂದನಾ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

**'ಎಲ್ಲರಿಗೂ ನಮಸ್ಕಾರಗಳು'** ಎಂದು ಕನ್ನಡದಲ್ಲಿ ಮಾತು ಆರಂಭಿಸಿದರು. ತಮ್ಮ ಒಂಭತ್ತು ನಿಮಿಷಗಳ ಪುಟ್ಟ ಭಾಷಣದಲ್ಲಿ ಸಿದ್ಧಗಂಗಾಮಠ, ಶಿವಕುಮಾರಸ್ವಾಮೀಜಿ ಸಾಧನೆಯನ್ನು ಸ್ಮರಿಸಿದರು. ಶಿಕ್ಷಣಕ್ಷೇತ್ರದ ಪ್ರಗತಿಯನ್ನು ಮುಕ್ತಕಂಠದಿಂದ ಹೊಗಳಿದರು. ಸ್ವಾಮೀಜಿಗಳ ಕಾಯಕ, ಸೇವೆಯನ್ನು ನೆನಪಿಸಿಕೊಳ್ಳಲು ಭಾಷಣವನ್ನು ಸೀಮಿತ ಗೊಳಿಸಿದರು.

"ಮೊದಲಿಗೆ ಸಿದ್ಧಗಂಗಾ ಮಠದ ಸ್ವಾಮೀಜಿ ಸೇವೆಯನ್ನು ಅಭಿನಂದಿಸುತ್ತೇನೆ. ಶಿವಕುಮಾರಸ್ವಾಮೀಜಿ ಲಕ್ಷಾಂತರ ಜನರಿಗೆ ಪ್ರೇರಕ ಶಕ್ತಿಯಾಗಿದ್ದಾರೆ. ರಾಷ್ಟ್ರ, ಜಗತ್ತಿಗೆ ಮಾದರಿಯಾಗಿ ಬೆಳಗುತ್ತಿದ್ದಾರೆ. ಶಿಕ್ಷಣ ಕ್ಷೇತ್ರದಲ್ಲಿ ಯಾರೂ ಮಾಡಲಾಗದ ಸಾಧನೆಯನ್ನು ಸ್ವಾಮೀಜಿ ಮಾಡಿ ತೋರಿಸಿದ್ದಾರೆ" ಎಂದು ಅವರು ಹೇಳಿದರು.

'ಮಠಗಳು ಗುಣಮಟ್ಟದ ಶಿಕ್ಷಣ ನೀಡುವ ಮೂಲಕ ಸಮಾಜಕ್ಕೆ ಸನ್ಮಾರ್ಗ ತೋರುತ್ತಿವೆ. ಸಮುದಾಯದಲ್ಲಿ ನೈತಿಕ ಮೌಲ್ಯವನ್ನು ಬಿತ್ತಿ ಬೆಳೆಸಿದ್ದಾರೆ. ವರ್ಗ ಜನರ ನಡುವೆ ತಾರತಮ್ಯ ಮಾಡದೆ ಶೈಕ್ಷಣಿಕ ಕ್ರಾಂತಿಯನ್ನೇ ಉಂಟುಮಾಡಿವೆ. ಸ್ವಾಮೀಜಿ ಸದಾ ನಮಗೆ ಪ್ರೇರಕರು. ಮಾರ್ಗದರ್ಶಕರೂ ಆಗಿದ್ದಾರೆ' ಎಂದು ಸೋನಿಯಾ ನುಡಿದರು.

ಕರ್ನಾಟಕದಲ್ಲಿ ಉತ್ತಮ ಶೈಕ್ಷಣಿಕ ವಾತಾವರಣ ಇದೆ. ಶ್ರೀಮಂತ ಸಂಸ್ಕೃತಿ, ಪರಂಪರೆಯನ್ನು ಹೊಂದಿದೆ. ಇತರೆಡೆಗಿಂತ ಉತ್ತಮ ಶಿಕ್ಷಣ, ಸೌಲಭ್ಯಗಳು ಇಲ್ಲಿ ಸಿಗುತ್ತಿವೆ. ಪ್ರಾಥಮಿಕ ಶಿಕ್ಷಣ ಮೂಲಭೂತ ಹಕ್ಕಾಗಿದ್ದು, ಎಲ್ಲರಿಗೂ ಶಿಕ್ಷಣ ಸಿಗುಮಂತೆ ನೋಡಿಕೊಳ್ಳಬೇಕು ಎಂದು ಸಲಹೆ ಮಾಡಿದರು. ಶಿಕ್ಷಣದ ಮೂಲಕವೇ ಮಕ್ಕಳಲ್ಲಿ ವೈಜ್ಞಾನಿಕತೆ, ನೈತಿಕ ಮೌಲ್ಯಗಳನ್ನು ಬಿತ್ತಬೇಕಾಗಿದೆ. ೬ರಿಂದ ೧೪ ವರ್ಷದ ಮಕ್ಕಳು ಶಿಕ್ಷಣದಿಂದ ವಂಚಿತರಾಗಬಾರದೆಂಬ ಉದ್ದೇಶದಿಂದ ಕಡ್ಡಾಯ ಶಿಕ್ಷಣ ಕಾಯ್ದೆ ಜಾರಿಗೊಳಿಸಲಾಗಿದೆ ಎಂದು ಹೇಳಿದರು.

***ಸೋನಿಯಾಗೆ ೫೦ ಸಾವಿರ ಬೆಲೆಯ ರೇಷ್ಮೆ ಸೀರೆ ಉಡುಗೊರೆ***

ಇಲ್ಲಿನ ಸಿದ್ಧಗಂಗಾ ಮಠದಲ್ಲಿ ಎಐಸಿಸಿ ಅಧ್ಯಕ್ಷೆ ಸೋನಿಯಾಗಾಂಧಿ ಅವರಿಗೆ ಬೆಲೆಬಾಳುವ ಮೈಸೂರು ರೇಷ್ಮೆ ಸೀರೆಯನ್ನು ಉಡುಗೊರೆಯಾಗಿ ನೀಡಲಾಯಿತು.

ಸಿದ್ಧಗಂಗಾ ಮಠದ ಡಾ॥ ಶಿವಕುಮಾರಸ್ವಾಮೀಜಿ ಗುರುವಂದನಾ ಸಮಾರಂಭದಲ್ಲಿ ಶನಿವಾರ ಭಾಗವಹಿಸುವ ಮುನ್ನ ಸೋನಿಯಾ ಗಾಂಧಿ ಮಠಕ್ಕೆ ಭೇಟಿ ನೀಡಿ ಸ್ವಾಮೀಜಿ ಅವರಿಂದ ಆಶೀರ್ವಾದ ಪಡೆದರು. ಸೋನಿಯಾ ಗಾಂಧಿ ಅವರಿಗೆ ಹೂಹಾರ ಹಾಕುವ ಜತೆಗೆ ರೇಷ್ಮೆ ಸೀರೆಯನ್ನು ಉಡುಗೊರೆಯಾಗಿ ಸ್ವಾಮೀಜಿ ನೀಡಿದರು. ಸೀರೆ ಸ್ವೀಕರಿಸಿದ ಸೋನಿಯಾ ಸೀರೆಯ ರೇಷ್ಮೆ ಜರಿಯನ್ನು ಮುಟ್ಟಿ ನೋಡಿದರು. ಸೀರೆ ರೂ. ೫೦ ಸಾವಿರದ್ದು ಎಂದು ಮಠದ ಮೂಲಗಳು ತಿಳಿಸಿವೆ.

***ಬಸವೇಶ್ವರ ವಚನದಲ್ಲಿ ಕ್ರಾಂತಿ ಬೀಜ***

ಬಸವಣ್ಣನವರ ವಚನಗಳಲ್ಲಿ ಕಾರ್ಲ್‌ಮಾರ್ಕ್ಸ್ ಸೇರಿದಂತೆ ಜಗತ್ತಿನ ಎಲ್ಲ ಚಿಂತಕರ, ಧರ್ಮಗಳ ಸಾರ ಅಡಗಿದೆ ಎಂದು ಸಾಹಿತಿ ಡಾ॥ ದೇ. ಜವರೇಗೌಡ ಹೇಳಿದರು.

ಸಿದ್ಧಗಂಗಾಮಠದ ಆವರಣದಲ್ಲಿ ಶನಿವಾರ ಡಾ॥ ಶ್ರೀ ಶ್ರೀ ಶಿವಕುಮಾರಸ್ವಾಮೀಜಿ ಹುಟ್ಟುಹಬ್ಬ ಹಾಗೂ ಗುರುವಂದನಾ ಕಾರ್ಯಕ್ರಮದ ಭಾಗವಾಗಿ ಆಯೋಜಿಸಿದ್ದ ಧಾರ್ಮಿಕ ಸಮ್ಮೇಳನದಲ್ಲಿ ಸಾಹಿತಿ ದೇ. ಜವರೇಗೌಡ ಅವರಿಗೆ ಸಿದ್ಧಗಂಗಾಮಠದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿ ಸಂಘದ ವತಿಯಿಂದ ನೀಡಲಾದ **'ಸಿದ್ಧಗಂಗಾಶ್ರೀ'** ಪ್ರಶಸ್ತಿ ಸ್ವೀಕರಿಸಿದ ಬಳಿಕ ಮಾತನಾಡಿದರು.

ರಾಷ್ಟ್ರಜೀವನದ ಎಲ್ಲ ಕ್ಷೇತ್ರಗಳು ಮಾಲಿನ್ಯದ ಕೂಪಗಳಾಗಿರುವುದರಿಂದ ಅವುಗಳ ನಿರ್ಮಲೀಕರಣ ಸಮಗ್ರ ಕಾಂತಿಯಿಂದ ಮಾತ್ರ ಸಾಧ್ಯ ಎಂದು ಹನ್ನೆರಡನೆಯ ಶತಮಾನದಲ್ಲೇ ಬಸವೇಶ್ವರರು ಹೇಳಿದ್ದರು. ಪ್ರಾಣದ ಹಂಗು ತೊರೆದು ಸಾಮಾಜಿಕ ಕ್ರಾಂತಿಯ ರೂಪುರೇಷೆ ರೂಪಿಸಿದ್ದರು. ಮಾನವೀಯತೆ, ಸಾಮಾಜಿಕ ನ್ಯಾಯ, ಅಸ್ಪೃಶ್ಯತಾ ನಿವಾರಣೆ, ಲಿಂಗ, ಜಾತಿ, ವರ್ಣಭೇದ ನಿರ್ಮೂಲನೆ, ಆರ್ಥಿಕ ಸಮಾನತೆ ಆ ಕ್ರಾಂತಿಯ ಗುರಿ ಆಗಿತ್ತು ಎಂದರು. ಬಸವ ಧರ್ಮ ಜಗತ್ತಿನ ಯಾವ ಧರ್ಮಕ್ಕೂ ಕಡಿಮೆಯೇನಲ್ಲ ಎಂದು ಅಭಿಪ್ರಾಯಪಟ್ಟರು. ಸಿದ್ಧಗಂಗಾ ಮಠಾಧೀಶ ಡಾ॥ ಶ್ರೀ ಶಿವಕುಮಾರ ಸ್ವಾಮೀಜಿ ಪ್ರಶಸ್ತಿ ಪ್ರದಾನ ಮಾಡಿದರು.

ಬಸವ ಸಮಿತಿ ಅಧ್ಯಕ್ಷ ಅರವಿಂದ ಜತ್ತಿ, ಅಲ್ ಅಮೀನ್ ಶಿಕ್ಷಣ ಸಂಸ್ಥೆ ಸಂಸ್ಥಾಪಕ ಡಾ॥ ಮಮ್ತಾಜ್ ಅಹಮದ್‌ಖಾನ್, ಸಿಎಸ್‌ಐ ಪ್ರೆಸ್‌ಬ್ರೈಟರ್ ಡಾ॥ ಮನೋಹರ ಚಂದ್ರಪ್ರಸಾದ್, ನಿವೃತ್ತ ಪ್ರಾಂಶುಪಾಲ ಡಾ॥ ಬಸವರಾಜ ಜಗಜಂಪಿ ಉಪನ್ಯಾಸ ನೀಡಿದರು.

ದೂರದರ್ಶನ ಕೇಂದ್ರದ ಉಪಮಹಾನಿರ್ದೇಶಕ ಡಾ॥ ಮಹೇಶ್ ಜೋಷಿ, ಎಂಎಸ್‌ಐಎಲ್ ಅಧ್ಯಕ್ಷ ಶ್ರೀ ವಿಕ್ರಂ ವಿ. ಪಾಟೀಲ್, ಜನಪದ ಗಾಯಕ ಬಾಣಂದೂರು ಕೆಂಪಯ್ಯ ಅವರನ್ನು ಸನ್ಮಾನಿಸಲಾಯಿತು.

*ಕೃಪೆ : ಪ್ರಜಾವಾಣಿ (ದಿನಾಂಕ : ೨೯.೪.೨೦೧೨)*





# ಸಿದ್ಧಗಂಗಾ ಶ್ರೀ ಗುರುವಂದನೆ
## ವಿದ್ಯಾರ್ಥಿಗಳ ವಚನಗಾಯನಕ್ಕೆ ಮನಸೋತು ತಲೆತೂಗಿದ ಕಾಂಗ್ರೆಸ್ ಅಧ್ಯಕ್ಷೆ

ಸಿದ್ಧಗಂಗೆ ಮಠಕ್ಕೆ ೧೦೫ ಲಕ್ಷ ದೇಣಿಗೆ, ವಚನ ಗಾಯನಕ್ಕೆ ಮನಸೋತು ತಲೆದೂಗಿದ ಕಾಂಗ್ರೆಸ್ ಅಧಿನಾಯಕಿ...! ಇದು ಶ್ರೀ ಸಿದ್ಧಗಂಗಾ ಮಠದಲ್ಲಿ ನಡೆದ ಶ್ರೀ ಶಿವಕುಮಾರ ಶ್ರೀಗಳ ಗುರುವಂದನಾ ಕಾರ್ಯಕ್ರಮದ ಹೈಲೈಟ್. ಕಾರ್ಯಕ್ರಮ ಉದ್ಘಾಟನೆಗೆ ಆಗಮಿಸಿದ್ದ ಎಐಸಿಸಿ ಅಧ್ಯಕ್ಷೆ ಸೋನಿಯಾ ಗಾಂಧಿ ಅನೇಕ ಕಾರಣಗಳಿಂದ ಎಲ್ಲರ ವಿಶೇಷ ಆಕರ್ಷಣೆಗೆ ಪಾತ್ರರಾಗಿದ್ದರು.

ಬೆಳಿಗ್ಗೆ ೧೧.೪೫ಕ್ಕೆ ಸುತ್ತೂರು ಮಠದ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮಿಜಿ, ಆದಿಚುಂಚನಗಿರಿ ಶ್ರೀ ಬಾಲಗಂಗಾಧರ ನಾಥ ಸ್ವಾಮಿಜಿ ಹಾಗೂ ಶ್ರೀ ಸಿದ್ಧಲಿಂಗ ಸ್ವಾಮೀಜಿಗಳೊಂದಿಗೆ ಶ್ರೀ ಶಿವಕುಮಾರ ಸ್ವಾಮೀಜಿಯವರನ್ನು ವೇದಿಕೆಗೆ ಕರೆತಂದ ಸೋನಿಯಾ, ಸಭೆಗೆ ವಂದಿಸಿ ತಮ್ಮ ಎಂದಿನ ಶೈಲಿಯಲ್ಲಿ ನೆರೆದ ಭಕ್ತಮಂಡಳಿಯತ್ತ ಕೈಬೀಸಿದರು.

ಭಾಷೆ ಬರದಿದ್ದರೂ ಭಾವನೆಯನ್ನು ಅರ್ಥಮಾಡಿಕೊಳ್ಳಬಹುದು ಎಂಬ ಮಾತು ಸೋನಿಯಾ ವಿಚಾರದಲ್ಲೂ ನಿಜವಾಯಿತು. ಶ್ರೀಮಠದ ವಿದ್ಯಾರ್ಥಿಗಳು ಹಾಗೂ ಸ್ನೇಹ ಬಳಗ ತಂಡದವರು ಪ್ರಸ್ತುತ ಪಡಿಸಿದ ವಚನ ಗಾಯನ ಎಐಸಿಸಿ ಅಧಿನಾಯಕಿಯನ್ನು ಸೂಜಿಗಲ್ಲಿನಂತೆ ಸೆಳೆಯಿತು.

**'ನುಡಿದರೆ ಮುತ್ತಿನ ಹಾರದಂತಿರಬೇಕು ಹಾಗೂ ಬಸವ ಬೆಳಕು ಬೆಳಗಲಿ'** ಎಂಬ ವಚನ ಗಾಯನದ ತಾಳ, ಲಯ ಮಾಧುರ್ಯಕ್ಕೆ ತಲೆದೂಗತೊಡಗಿದ ಅವರು ತಾಳ ಹಾಕುತ್ತಿದ್ದರು. ಇಷ್ಟಕ್ಕೂ ಸುಮ್ಮನಾಗದೆ ಅವರು ತಮ್ಮ ಪಕ್ಕದಲ್ಲಿ ಕುಳಿತಿದ್ದ ಸುತ್ತೂರು ಶ್ರೀಗಳಿಂದ ಆ ವಚನದ ಅರ್ಥವನ್ನು ಕೇಳಿ ತಮ್ಮ ಸಹಾಯಕನಿಂದ ಪೆನ್ನು ಹಾಗೂ ಕಾಗದವನ್ನು ಪಡೆದು ಬರೆದುಕೊಂಡರು.

**೧೦೫ ದೀಪ ಬೆಳಗಿದರು :** ಗುರುವಂದನೆಯ ಸಂಕೇತವಾಗಿ ವಿದ್ಯುತ್ ಚಾಲಿತ ೧೦೫ ದೀಪಗಳನ್ನು ಬೆಳಗಿದ ಸೋನಿಯಾ ಗಾಂಧಿ, ಕೆಪಿಸಿಸಿ ಅಧ್ಯಕ್ಷ ಡಾ. ಜಿ. ಪರಮೇಶ್ವರ, ಮಾಜಿ ಸಚಿವೆ ರಾಣಿ ಸತೀಶ್ ಹಾಗೂ ಹಿರಿಯ ನಾಯಕ ಶ್ಯಾಮನೂರು ಶಿವಶಂಕರಪ್ಪ ಅವರ ಜೊತೆಗೂಡಿ ಸಿದ್ಧಗಂಗಾ ಶ್ರೀಗಳನ್ನು ಅಭಿನಂದಿಸಿದರು.

**೧೦೫ ಲಕ್ಷ ಸಮರ್ಪಣೆ :** ಇದರ ಜೊತೆಗೆ ಕಾಂಗ್ರೆಸ್ ಪಕ್ಷದ ವತಿಯಿಂದ ಶ್ರೀಗಳ ಸನ್ನಿದಿಗೆ ೧೦೫ ಲಕ್ಷ ಸಮರ್ಪಿಸಲಾಯಿತು. ೧೦೫ ದೀಪ ಬೆಳಗುವುದು ಹಾಗೂ ೧೦೫ ಲಕ್ಷ ಕಾಣಿಕೆ ನೀಡಿದ್ದು, ತ್ರಿವಿಧ ದಾಸೋಹಿಗೆ ೧೦೫ ವರ್ಷ ಪೂರೈಸಿದ್ದಾಕ್ಕಾಗಿ.

**ಎಲ್ಲರಿಗೂ ನಮಸ್ಕಾರ :** ನಂತರ ಮಾತನಾಡಿದ ಸೋನಿಯಾ ಗಾಂಧಿ, ಮೊದಲು ಕನ್ನಡದಲ್ಲಿ ಎಲ್ಲರಿಗೂ ನನ್ನ ನಮಸ್ಕಾರ ಎಂದಾಗ ಸಭೆ ಕರತಾಡನ ಮುಗಿಲು ಮುಟ್ಟಿತ್ತು. ಶ್ರೀ ಶಿವಕುಮಾರಶ್ರೀಗಳು ರಾಷ್ಟ್ರಕ್ಕೆ ನೀಡಿದ ಕೊಡುಗೆ ಯನ್ನು ಮನದುಂಬಿ ಶ್ಲಾಘಿಸಿದ ಅವರು, ಶಿಕ್ಷಣ ಮತ್ತು ಸಾಮಾಜಿಕ ಕ್ಷೇತ್ರದ ಅಭಿವೃದ್ಧಿಗೆ ಶ್ರೀಗಳು ತಮ್ಮ ಜೀವಿತಾವಧಿ ಯನ್ನು ಸವೆಸಿದ್ದಾರೆ. ಅವರಿಗೆ ನನ್ನ ಪ್ರಣಾಮ ಎಂದು ಹೇಳಿದರು.

ಅಕ್ಷರ ದಾಸೋಹ ಮಾಡುತ್ತಿರುವ ಶ್ರೀಕ್ಷೇತ್ರ ನಮ್ಮ ಸರ್ಕಾರಕ್ಕೆ ಪ್ರೇರಣೆ. ಈ ಕಾರಣಕ್ಕಾಗಿಯೇ ನಾವು ಶಿಕ್ಷಣದ ಹಕ್ಕನ್ನು ಕಡ್ಡಾಯಗೊಳಿಸಿದ್ದೇವೆ. ೬ರಿಂದ ೧೪ ವರ್ಷದ ಮಕ್ಕಳಿಗೆ ಸರ್ಕಾರ ಉಚಿತವಾಗಿ ಶಿಕ್ಷಣ ನೀಡಬೇಕು ಎಂಬ ನೀತಿಯನ್ನು ನಾವು ಜಾರಿಗೆ ತಂದಿದ್ದೇವೆ ಎಂದು ಹೇಳಿದರು.

ಶ್ರೀಕ್ಷೇತ್ರ ಉತ್ತಮ ವಿದ್ಯಾರ್ಥಿಗಳನ್ನು ಸೃಷ್ಟಿಸುತ್ತಿದೆ. ದೇಶ ನಿರ್ಮಾಣಕ್ಕೆ ಇವರ ಕೊಡುಗೆ ಅಪಾರ. ಇಲ್ಲಿ ವಿದ್ಯಾಭ್ಯಾಸ ಮಾಡಿದ ವಿದ್ಯಾರ್ಥಿಗಳು ದೇಶದ ಅನೇಕ ಉನ್ನತ ಹುದ್ದೆಗಳಲ್ಲಿ ಇದ್ದಾರೆ. ಸ್ತ್ರೀ-ಪುರುಷರ ನಡುವಿನ ಅಸಮಾನತೆ ಹೋಗಲಾಡಿಸಲು ಶಿಕ್ಷಣ ತೀರಾ ಮುಖ್ಯ ಎಂದು ಅಭಿಪ್ರಾಯಪಟ್ಟರು.

ಸಿದ್ಧಗಂಗಾಶ್ರೀಗಳ ಜೀವನದ ಗುರಿ ಬಡ ಮಕ್ಕಳಿಗೆ ಅನ್ನ, ಆರೋಗ್ಯ ಹಾಗೂ ಅಕ್ಷರವನ್ನು ಕಲ್ಪಿಸುವುದು. ಈ ವಯಸ್ಸಿನಲ್ಲೂ ಅವರು ತೋರುವ ಬದ್ಧತೆ ಹಾಗೂ ಶ್ರದ್ಧೆ ನಮಗೆಲ್ಲ ಮಾದರಿ. ಮಾತ್ರವಲ್ಲ ಶ್ರೀಮಠ ಜಾತ್ಯಾತೀತ ತತ್ವದಲ್ಲಿ ಇರಿಸಿಕೊಂಡಿರುವ ನಂಬಿಕೆಯಿಂದ ನಾನೂ ಆಕರ್ಷಿತನಾಗಿದ್ದೇನೆ ಎಂದು ಹೇಳಿದರು.

*(ಕೃಪೆ : ಕನ್ನಡಪ್ರಭ , ದಿನಾಂಕ ೨೯.೪.೨೦೧೨)*

# ಸಿದ್ಧಗಂಗಾ ಶ್ರೀ ಪರಿಶ್ರಮ ಎಲ್ಲರಿಗೂ ಮಾದರಿ

## ಶಿಕ್ಷಣದಲ್ಲಿ ಜಾತ್ಯಾತೀತ ಮೌಲ್ಯ ಸಂಪ್ರದಾಯ ಅಳವಡಿಕೆಯಾಗಲಿ. ಶಿವಕುಮಾರಸ್ವಾಮಿ ಗುರುವಂದನೆಯಲ್ಲಿ ಕಾಂಗ್ರೆಸ್ ಅಧ್ಯಕ್ಷೆ ಸೋನಿಯಾ

'ನಮ್ಮ ಶಿಕ್ಷಣ ವ್ಯವಸ್ಥೆಯಲ್ಲಿ ಜಾತ್ಯಾತೀತ ಮೌಲ್ಯಗಳು ಮತ್ತು ಸಂಪ್ರದಾಯಗಳನ್ನು ಅಳವಡಿಸುವ ಮೂಲಕ ದೇಶ ವಿಭಜಕ ಶಕ್ತಿಗಳಿಗೆ ವಿವಿಧತೆಯಲ್ಲಿ ಏಕತೆಯ ಸಂದೇಶ ನೀಡಬೇಕಿದೆ' ಎಂದು ಯುಪಿಎ ಅಧ್ಯಕ್ಷೆ ಸೋನಿಯಾ ಗಾಂಧಿ ಪ್ರತಿಪಾದಿಸಿದ್ದಾರೆ.

ಸಿದ್ಧಗಂಗಾ ಮಠದ ಆವರಣದಲ್ಲಿ ಶನಿವಾರ ಹಮ್ಮಿಕೊಂಡಿದ್ದ ಡಾ|| ಶಿವಕುಮಾರ ಸ್ವಾಮಿಜಿಯವರ ೧೦೫ನೇ ಗುರುವಂದನಾ ಮಹೋತ್ಸವದಲ್ಲಿ ೧೦೫ ದೀಪಗಳನ್ನು ಬೆಳಗಿಸಿ ಅವರು ಮಾತನಾಡಿದರು.

ಕೆಳಸಮುದಾಯದ ಬಲವರ್ಧನೆಗೆ ಶಿಕ್ಷಣವೊಂದೇ ನಮ್ಮ ಮುಂದಿರುವ ಮಾರ್ಗ. ಸಮಾಜವನ್ನು ಸರ್ವತೋಮುಖವಾಗಿ ಅಭಿವೃದ್ಧಿಗೊಳಿಸಿ, ಸಮಾನತೆ ನೆಲೆಸುವಂತೆ ಮಾಡಲು ಶಿಕ್ಷಣ ಅತ್ಯವಶ್ಯಕ. ಆದರೆ, ಅದರ ಕೊರತೆಯಿಂದ ಈಗಲೂ ಅಸಮಾನತೆ ಮುಂದುವರಿದಿದೆ. ಪರಿಣಾಮ ಜನರನ್ನು ಬಡತನ ಕಿತ್ತು ತಿನ್ನುತ್ತಿದೆ ಎಂದು ಕಳವಳವ್ಯಕ್ತಪಡಿಸಿದರು. ಯುಪಿಎ ಸರ್ಕಾರ ಕಡ್ಡಾಯ ಶಿಕ್ಷಣವನ್ನು ಮಗುವಿನ ಮೂಲಭೂತ ಹಕ್ಕನ್ನಾಗಿ ಮಾಡಿದೆ. ಪೋಷಕರು ಈ ಹಕ್ಕನ್ನು ಸಮರ್ಥವಾಗಿ ಬಳಸಿಕೊಳ್ಳಬೇಕು. ಅಂದಾಗ, ಸದೃಢ ರಾಷ್ಟ್ರ ನಿರ್ಮಾಣ ಸಾಧ್ಯ ಎಂದು ತಿಳಿಸಿದರು.

### *ಭವಿಷ್ಯದ ಸವಾಲುಗಳಿಗೆ ಶಿಕ್ಷಣ*

ಭವಿಷ್ಯದ ಸವಾಲುಗಳನ್ನು ಎದುರಿಸಲು, ವ್ಯಕ್ತಿಯಲ್ಲಿ ಶಿಸ್ತು-ಸಂಯಮ, ಸಂಸ್ಕೃತಿಯನ್ನು ಬೆಳೆಸಲು ಶಿಕ್ಷಣ ಅತ್ಯವಶ್ಯಕ ಎಂದ ಅವರು, ಇದನ್ನು ಮನಗಂಡ ಡಾ|| ಶ್ರೀ ಶಿವಕುಮಾರಸ್ವಾಮಿಯವರ ದೂರದೃಷ್ಟಿ ಹಾಗೂ ಶಿಕ್ಷಣ ಕ್ಷೇತ್ರದಲ್ಲಿ ಸ್ವಾಮೀಜಿ ಮಾಡಿದ ನಿಸ್ವಾರ್ಥ ಸೇವೆ ಅನನ್ಯವಾದುದು ಎಂದು ಹೊಗಳಿದರು.

ಡಾ|| ಶಿವಕುಮಾರಸ್ವಾಮೀಜಿ ಅವರು ಹಲವು ವರ್ಷಗಳಿಂದ ನಡೆಸಿಕೊಂಡು ಬರುತ್ತಿರುವ ಶಿಕ್ಷಣ ಸಂಸ್ಥೆಗಳು ಸಮಾನತೆಗೆ ಹಿಡಿದ ಕನ್ನಡಿ. ಸ್ವಾಮೀಜಿಯವರ ಕಠಿಣ ಪರಿಶ್ರಮ ಇತರರೆಲ್ಲರಿಗೂ ಆದರ್ಶ. ಅವರ ಈ ಸಾಮಾಜಿಕ ಕ್ರಾಂತಿ ದೇಶದ ಉದ್ದಗಲಕ್ಕೂ ಹರಡಿದೆ ಎಂದು ಶ್ಲಾಘಿಸಿದರು.

ಆದಿಚುಂಚನಗಿರಿ ಶ್ರೀಗಳು ಮಾತನಾಡಿ, ಆರೋಗ್ಯ, ಅನ್ನ ಮತ್ತು ಅಕ್ಷರವನ್ನು ಎಲ್ಲರಿಗೂ ನೀಡಿ, ಗ್ರಾಮೀಣ ಭಾಗದ ಜನರಲ್ಲಿ ಜಾಗೃತಿ ಮೂಡಿಸುವ ಕೆಲಸ ಮಠಗಳಿಂದ ಆಗಬೇಕು. ಇದನ್ನು ಸಿದ್ಧಗಂಗಾ ಮಠ ತೋರಿಸಿಕೊಟ್ಟಿದೆ' ಎಂದರು. ಸುತ್ತೂರು ಮಠದ ಶಿವರಾತ್ರಿ ದೇಶೀಕೇಂದ್ರ ಸ್ವಾಮೀಜಿ, ದೀಪ ತಾನು ಉರಿದು ಜಗತ್ತಿಗೆ ಬೆಳಕು ನೀಡುತ್ತದೆ. ಅದೇ ರೀತಿ, ಶಿವಕುಮಾರಸ್ವಾಮೀಜಿ ತಮ್ಮ ಜೀವನವನ್ನು ಜನತೆಯ ಸೇವೆಗಾಗಿ ಸವೆಸಿದ ತ್ಯಾಗಮಯಿ ಎಂದು ಬಣ್ಣಿಸಿದರು.

ಗುರುವಂದನೆ ಸಲ್ಲಿಸಿದ ಸಿದ್ಧಗಂಗಾ ಮಠದ ಕಿರಿಯ ಯತಿ ಸಿದ್ಧಲಿಂಗ ಸ್ವಾಮೀಜಿ, ಡಾ|| ಶಿವಕುಮಾರ ಸ್ವಾಮೀಜಿಗಳ ಹಾದಿಯಲ್ಲಿ ನಡೆಯುವುದೇ ಗುರುವಂದನೆ' ಎಂದು ಹೇಳಿದರು. ಜಯಣ್ಣ ಸ್ವಾಗತಿಸಿದರು. ಡಾ|| ಚನ್ನಬಸಪ್ಪ ಪರಿಚಯಿಸಿದರು. ಡಾ|| ಕೆ.ಇ. ರಾಧಾಕೃಷ್ಣ ಕಾರ್ಯಕ್ರಮ ನಿರೂಪಣೆ ಮಾಡಿದರು.

### *ದ್ವೇಷ, ಅಸೂಯೆ ಬದಿಗೊತ್ತಿ*

ಶ್ರೀಗಳು ಗುರುವಂದನೆ ಸ್ವೀಕರಿಸಿ ಮಾತನಾಡಿದ ಡಾ|| ಶಿವಕುಮಾರಸ್ವಾಮೀಜಿ 'ವಿಜ್ಞಾನ ಮತ್ತು ತಂತ್ರಜ್ಞಾನ ಸಾಕಷ್ಟು ಅಭಿವೃದ್ಧಿ ಹೊಂದಿದ್ದರೂ ಸಮಾಜದಲ್ಲಿ ಶಾಂತಿ-ನೆಮ್ಮದಿ ತರುವಲ್ಲಿ ಸಾಧ್ಯವಾಗಿಲ್ಲ. ಈಗಲೂ ಭಯೋತ್ಪಾದನೆ, ಹಿಂಸೆ, ಕಿತ್ತಾಟ, ಹಸಿವು ಮತ್ತಿತರ ಸಮಸ್ಯೆಗಳು ತಾಂಡವವಾಡುತ್ತಿವೆ. ಇದಕ್ಕೆಲ್ಲ ಆಧ್ಯಾತ್ಮಿಕತೆ ಮತ್ತು ಧರ್ಮ ಹಾಗೂ ರಾಷ್ಟ್ರೀಯತೆಯೊಂದೇ ಪರಿಹಾರ' ಎಂದು ತಿಳಿಸಿದರು. ಈ ನಿಟ್ಟಿನಲ್ಲಿ ನಮ್ಮೆಲ್ಲರ ಜವಾಬ್ದಾರಿ ಹೆಚ್ಚಿದೆ. ಪ್ರತಿಯೊಬ್ಬರೂ ತಮ್ಮ ಸ್ಥಾನ ಮತ್ತು ತಮಗೆ ವಹಿಸಿದ ಕರ್ತವ್ಯಗಳನ್ನು ಅರಿತು, ಸಮರ್ಥವಾಗಿ ನಿರ್ವಹಿಸಬೇಕು. ದ್ವೇಷ-ಅಸೂಯೆ ಬದಿಗೊತ್ತಿ ನಾವೆಲ್ಲರೂ ಒಂದೇ ಎಂಬ ಭಾವನೆ ತಳೆಯಬೇಕು. ಈ ನಿಟ್ಟಿನಲ್ಲಿ ಸಂಕಲ್ಪ ಮಾಡಬೇಕು ಎಂದು ಕಿವಿಮಾತು ಹೇಳಿದರು.

### *ಅನಿಷ್ಟ ನಿವಾರಣೆಗೆ ಸಮಗ್ರ ಕ್ರಾಂತಿ ಅಗತ್ಯ : ದೇ. ಜವರೇಗೌಡರಿಗೆ ಸಿದ್ಧಗಂಗಾಶ್ರೀ ಪ್ರಶಸ್ತಿ ಪ್ರದಾನ*

ರಾಷ್ಟ್ರಜೀವನದ ಎಲ್ಲಾ ಕ್ಷೇತ್ರಗಳೂ ಮಾಲಿನ್ಯದ ಕೂಪಗಳಾಗಿರುವುದರಿಂದ ಅವುಗಳ ನಿರ್ಮಲೀಕರಣ ಸಮಗ್ರ ಕ್ರಾಂತಿಯಿಂದ ಮಾತ್ರ ಸಾಧ್ಯ ಎಂದು ಕರ್ನಾಟಕರತ್ನ, ನಾಡೋಜ ಡಾ. ದೇ. ಜವರೇಗೌಡ ಅಭಿಪ್ರಾಯಪಟ್ಟರು.





ನಗರದ ಶ್ರೀ ಸಿದ್ಧಗಂಗಾ ಮಠದಲ್ಲಿ ಡಾ|| ಶ್ರೀ ಶಿವಕುಮಾರ ಸ್ವಾಮೀಜಿಗಳ ೧೦೫ನೇ ಜನ್ಮದಿನೋತ್ಸವ ಹಾಗೂ ಗುರುವಂದನಾ ಮಹೋತ್ಸವದಲ್ಲಿ ಶನಿವಾರ ಸಂಜೆ ಏರ್ಪಡಿಸಿದ್ದ ಧಾರ್ಮಿಕ ಸಮ್ಮೇಳನದಲ್ಲಿ ಶ್ರೀಮಠದ ಹಳೆಯ ವಿದ್ಯಾರ್ಥಿಗಳ ಹಾಗೂ ಹಿತೈಷಿಗಳ ಸಂಘ ಪ್ರದಾನ ಮಾಡಿದ 'ಸಿದ್ಧಗಂಗಾಶ್ರೀ' ಪ್ರಶಸ್ತಿ ಸ್ವೀಕರಿಸಿ ಮಾತನಾಡುತ್ತಿದ್ದರು. ಭಾರತ ವೇದೋಪನಿಷತ್ತು, ಭಗವದ್ಗೀತೆಗಳ ಮೂಲನೆಲೆಯಾದರೂ ಹಲವು ಅವತಾರ ಪುರುಷರ ಸಾಧು ಸಂತರ, ಧರ್ಮಪೀಠಗಳ ಜನ್ಮಸ್ಥಳವಾದರೂ ಯಾವ ದೇಶದಲ್ಲಿಯೂ ಕಾಣದ ಭ್ರಷ್ಟಾಚಾರ ಅಧರ್ಮಗಳು ತುಂಬಿ ತುಳುಕುತ್ತಿವೆ. ಈ ದೇಶದಲ್ಲಿರುವಷ್ಟು ಅನಿಷ್ಟಗಳು ಬೇರ್‍ಯಾವ ದೇಶದಲ್ಲಿಯೂ ಇಲ್ಲ. ಈ ಎಲ್ಲಾ ಅನಿಷ್ಟಗಳ ನಿವಾರಣೆಗೆ ಸಮಗ್ರ ಹೋರಾಟದಿಂದ ಮಾತ್ರ ಸಾಧ್ಯ ಎಂದರು. ೧೨ನೇ ಶತಮಾನದಲ್ಲಿ ಬಸವೇಶ್ವರರು ಅನಿಷ್ಟಗಳ ವಿರುದ್ಧ ತಮ್ಮ ಪ್ರಾಣದ ಹಂಗು ತೊರೆದು ಕ್ರಾಂತಿಯ ರೂಪು ರೇಷೆಗಳನ್ನು ರಚಿಸಿದರು. ಮಾನವೀಯತೆ, ಸಾಮಾಜಿಕ ನ್ಯಾಯ, ಅಸ್ಪೃಶ್ಯತಾ ನಿವಾರಣೆ, ಲಿಂಗಪೂಜೆ, ವರ್ಣ ಬೇಧ ನಿರ್ಮೂಲನೆ, ಆರ್ಥಿಕ ಸಮಾನತೆ, ಧಾರ್ಮಿಕ ಸಮೀಕರಣ ಇವು ಆ ಕ್ರಾಂತಿಯ ಗುರಿಗಳಾಗಿದ್ದವು ಎಂದು ಹೇಳಿದರು. ಶ್ರೀಕ್ಷೇತ್ರ ಸಿದ್ಧಗಂಗಾಮಠ ಕನ್ನಡ ನಾಡಿಯನಲ್ಲಿಯೇ ಹೆಸರುವಾಸಿಯಾದ ಕ್ಷೇತ್ರವಾಗಿದೆ. ನನಗೆ ಹಲವಾರು ಪ್ರಶಸ್ತಿಗಳು ಲಭಿಸಿರಬಹುದು. ಕರ್ನಾಟಕರತ್ನ ಪ್ರಶಸ್ತಿಯೂ ಬಂದಿದೆ. ಆದರೆ ಸಿದ್ಧಗಂಗಾ ಮಠದಲ್ಲಿ ಪಡೆಯುತ್ತಿರುವ ಈ ಪ್ರಶಸ್ತಿ ನನಗೆ ಅತೀವ ಆನಂದ ಉಂಟುಮಾಡಿದೆ ಎಂದರು.

ಸಾನ್ನಿಧ್ಯ ವಹಿಸಿದ್ದ ಕರ್ನಾಟಕರತ್ನ ಡಾ|| ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಡಾ|| ದೇ. ಜವರೇಗೌಡರಿಗೆ ಸಿದ್ಧಗಂಗಾಶ್ರೀ ಪ್ರಶಸ್ತಿ ಪ್ರದಾನ ಮಾಡಿದರು. ಸರ್ವಧರ್ಮದಲ್ಲಿ ಶ್ರದ್ಧೆ, ಇತರ ಧರ್ಮಗಳ ಬಗ್ಗೆ ಗೌರವ ಕುರಿತು ಹಲವು ಗಣ್ಯರು ಮಾತನಾಡಿದರು.

ಪಾವಗಡ ರಾಮಕೃಷ್ಣಾಶ್ರಮದ ಶ್ರೀ ಜಪಾನಂದ ಸ್ವಾಮೀಜಿ ಅಧ್ಯಕ್ಷತೆ ವಹಿಸಿದ್ದರು. ಅನುಭಾವಪಥ ಗ್ರಂಥವನ್ನು ನಿಡಸೋಸಿ ಶ್ರೀ ಜಗದ್ಗುರು ದುರದುಂಡೀಶ್ವರ ಸಂಸ್ಥಾನದ ಶ್ರೀ ಪಂಚಮಶಿವ ಲಿಂಗೇಶ್ವರ ಸ್ವಾಮೀಜಿ ಬಿಡುಗಡೆ ಮಾಡಿದರು. ಯುಗಗಂಗಾ ಗ್ರಂಥವನ್ನು ಬೆಂಗಳೂರು ಬೇಲಿಮಠದ ಶ್ರೀ ಶಿವಾನುಭವ ಚರಮೂರ್ತಿ ಶಿವರುದ್ರಸ್ವಾಮೀಜಿ ಬಿಡುಗಡೆ ಮಾಡಿದರು.

ಬಸವ ಸಮಿತಿ ಅಧ್ಯಕ್ಷ ಅರವಿಂದ ಜತ್ತಿ, ಅಲ್ ಅಮೀನ್ ಎಜುಕೇಷನ್ ಸೊಸೈಟಿಯ ಮುಮ್ತಾಜ್ ಅಹಮದ್‌ಖಾನ್, ಡಾ|| ಮನೋಹರ್ ಚಂದ್ರಪ್ರಸಾದ್, ಡಾ|| ಬಸವರಾಜ ಜಗಜಂಪಿ ಉಪನ್ಯಾಸ ನೀಡಿದರು. ದೂರದರ್ಶನ ಕೇಂದ್ರದ ಉಪಮಹಾ ನಿರ್ದೇಶಕ ಡಾ|| ಮಹೇಶ್ ಜೋಷಿ, ಎಂಎಸ್‌ಐಎಲ್ ಅಧ್ಯಕ್ಷ ವಿಕ್ರಂ. ವಿ. ಪಾಟೀಲ್ ಹಾಗೂ ಜನಪದ ಗಾಯಕ ಡಾ. ಬಾನಂದೂರು ಕೆಂಪಯ್ಯ ಅವರನ್ನು ಸನ್ಮಾನಿಸಲಾಯಿತು. ಡಾ|| ಎಂ.ಎನ್. ಚನ್ನಬಸಪ್ಪ ಕೆ.ಎಚ್. ಶಿವರುದ್ರಯ್ಯ, ಪ್ರೊ.ಹೆಚ್.ವಿ. ವೀರಭದ್ರಯ್ಯ, ಎಂ.ರೇಣುಕಾರಾಧ್ಯ, ಎಸ್. ವಿಶ್ವನಾಥಯ್ಯ ಉಪಸ್ಥಿತರಿದ್ದರು.

*(ಕೃಪೆ : ಉದಯವಾಣಿ, ದಿನಾಂಕ : ೨೯.೪.೨೦೧೨)*

*ಸತ್ಯವಿಲ್ಲದ ಭಕ್ತಿಯ ಸಾವಿರ ವರುಷ ಮಾಡಿದರೇನು?*
*ನಿಷ್ಠೆಯಿಲ್ಲದ ಪೂಜೆಯನೇಸುಕಾಲ ಮಾಡಿದರೇನು?*
*ಭಾವ ನೆಲೆಗೊಳ್ಳದ ಪ್ರಸಾದನೇಸುಕಾಲ ಕೊಂಡಲ್ಲಿ ಫಲವೇನು?*
*ಅಭ್ಯಾಸವಾಯಿತ್ತಲ್ಲದೆ,*
*ಒಬ್ಬರೊಬ್ಬರ ಕಂಡು ಮಾಡುವರಲ್ಲದೆ, ಸಹಜವಿಲ್ಲ,*
*ಸಮ್ಯಕ್ಕಿಲ್ಲ, ನಿಜವಿಲ್ಲ.*
*ಇದು ಕಾರಣ, ಇಂತಪ್ಪವರ ಭಕ್ತರೆಂದೆನಲಾಗದು,*
*ಕೂಡಲಚೆನ್ನಸಂಗಯ್ಯಾ ನೀ ಸಾಕ್ಷಿಯಾಗಿ*

*ಗುರುಶಿಷ್ಯಸಂಬಂಧವನೇನೆಂದುಪಮಿಸುವೆ?*
*ಜ್ಯೋತಿಯಲೊದಗಿದ ಜ್ಯೋತಿಯಂತಿರಬೇಕು,*
*ದರ್ಪಣದೊಳಡಗಿದ ಪ್ರತಿಬಿಂಬದಂತಿರಬೇಕು.*
*ಸ್ಫಟಿಕದೊಳಗಿರಿಸಿದ ರತ್ನದಂತಿರಬೇಕು,*
*ರೂಪಿನ ನೆಳಲಿನ ಅಂತರಂಗದಂತಿರಬೇಕು.*
*ಇದು ಕಾರಣ, ಕೂಡಲಚೆನ್ನಸಂಗಯ್ಯಾ*
*ದರ್ಪಣವ ದರ್ಪಣಕ್ಕೆ ತೋರಿದಂತಿರಬೇಕು.*

– ಚನ್ನಬಸವಣ್ಣ

# ಸಿದ್ಧಗಂಗಾ ಶ್ರೀಗಳಿಗೆ ೧೦೫ನೇ ಜನ್ಮದಿನೋತ್ಸವದಲ್ಲಿ ಗುರುವಂದನೆ
# ಸಿದ್ಧರ ಸನ್ನಿಧಿಯಲ್ಲಿ ಸೋನಿಯಾ

**ಡಾ॥** ಶ್ರೀ ಶಿವಕುಮಾರಸ್ವಾಮೀಜಿ ಅವರು ಮನುಕುಲದ ಏಳಿಗೆಗಾಗಿ ನಿರಂತರ ಶ್ರಮಿಸಿ ವಿಶ್ವಭೂಪಟದಲ್ಲಿ ಗುರುತಿಸಿ ಕೊಂಡಿದ್ದಾರೆ ಎಂದು ಯುಪಿಎ ಅಧ್ಯಕ್ಷೆ ಶ್ರೀಮತಿ ಸೋನಿಯಾ ಗಾಂಧಿ ಬಣ್ಣಿಸಿದರು. ತುಮಕೂರಿನ ಶ್ರೀ ಸಿದ್ಧಗಂಗಾ ಮಠದಲ್ಲಿ ಶನಿವಾರ ನಡೆದ ಡಾ॥ ಶ್ರೀ ಶಿವಕುಮಾರಸ್ವಾಮಿಗಳ ಗುರುವಂದನೆ, ೧೦೫ನೇ ಜನ್ಮದಿನೋತ್ಸವ ಸಮಾರಂಭ ಉದ್ಘಾಟಿಸಿ ಮಾತನಾಡಿದರು.

ಎಲ್ಲರಿಗೂ ನಮಸ್ಕಾರ ಎಂದು ಕನ್ನಡದಲ್ಲಿ ಹೇಳಿ ಭಾಷಣ ಆರಂಭಿಸಿದ ಸೋನಿಯಾ ಕೊನೆಯಲ್ಲಿ **'ಶರಣು ಶರಣಾರ್ಥಿ'** ಎಂದು ಮಾತು ಮುಗಿಸಿದರು. ಮಕ್ಕಳಿಗೆ ಶಿಕ್ಷಣ ಅತ್ಯಗತ್ಯ. ಆದರೆ ಜಾತ್ಯಾತೀತ ನೆಲೆಗಟ್ಟಿನಲ್ಲಿ ಶಿಕ್ಷಣ ಇರಬೇಕು. ೧೪ ವರ್ಷದೊಳಗಿನ ಮಕ್ಕಳು ಯಾವುದೇ ಕಾರಣಕ್ಕೂ ಶಿಕ್ಷಣ ವಂಚಿತರಾಗಬಾರದೆಂಬ ಸದುದ್ದೇಶದಿಂದ ಕೇಂದ್ರ ಸರಕಾರ ಕಡ್ಡಾಯ ಶಿಕ್ಷಣ ಹಕ್ಕು ಕಾಯಿದೆ ಜಾರಿಗೆ ತಂದಿದೆ. ಸಿದ್ಧಗಂಗಾ ಶ್ರೀಗಳು ಜಾತಿ, ಮತದ ಸೋಂಕಿಲ್ಲದೇ ಬಡವರಿಗೆ ಶಿಕ್ಷಣ ನೀಡುತ್ತಿದ್ದಾರೆ. ೧೦೫ನೇ ವರ್ಷಕ್ಕೆ ಕಾಲಿಟ್ಟ ಶ್ರೀಗಳ ಕಾರ್ಯ ಸಂತಸ ತಂದಿದೆ. ಅವರಿಗೆ ನನ್ನ ಪ್ರಣಾಮಗಳು ಎಂದು ಹೇಳಿದರು.

ಆದಿಚುಂಚನಗಿರಿ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿ ಮಾತನಾಡಿ, ಸೋನಿಯಾ ಗಾಂಧಿ ಅವರು ಮಹಿಳೆಯರ ಪ್ರತಿನಿಧಿ. ದೇಶವನ್ನು ಕಟ್ಟುವ ಭವ್ಯ ಭವಿಷ್ಯ ರೂಪಿಸುವ ಸಮರ್ಥ ವ್ಯಕ್ತಿ ಎಂದು ಸಾಬೀತು ಮಾಡಿದ್ದಾರೆ. ದೇಶವನ್ನು ಸನ್ನಡತೆಯಲ್ಲಿ ಒಯ್ಯುತ್ತಿದ್ದಾರೆ. ಇಡೀ ದೇಶ ನೋಡುತ್ತಿರುವಂಥ ವ್ಯಕ್ತಿ ಇಲ್ಲಿಗೆ ಬಂದಿದ್ದಾರೆ ಎಂದು ಬಣ್ಣಿಸಿದರು.

ಸಿದ್ಧಗಂಗಾ ಮಠವನ್ನು ದಿಲ್ಲಿಯ ಕಡೆ ಬೆಳೆಸಲು ಸೋನಿಯಾ ಸಹಕಾರ ಸಿಗಲಿ. ಸಿದ್ಧಗಂಗಾ ಶ್ರೀಗಳು ಯಾವುದೇ ಕಾರ್ಯಕ್ರಮಕ್ಕೂ ಬಿಡದೇ ನಮ್ಮನ್ನು ಪ್ರೀತಿಯಿಂದ ಕಂಡಿದ್ದಾರೆ ಎಂದು ಸ್ಮರಿಸಿದರು. ಅನ್ನ, ಅಕ್ಷರ, ಆರೋಗ್ಯದಲ್ಲಿ ನಮ್ಮ ಮಠ ಕೂಡ ಕಾಳಜಿ ಹೊಂದಿದ್ದು, ಸಮಾಜ ಸೇವಾ ಮಾರ್ಗದಲ್ಲಿ ಮುನ್ನಡೆಸಿದೆ ಎಂದರು.

ಸುತ್ತೂರು ಶ್ರೀ ಶಿವರಾತ್ರಿ ದೇಶೀಕೇಂದ್ರ ಸ್ವಾಮೀಜಿ ಮಾತನಾಡಿ, ಶ್ರೀಗಳು ೧೦೦ರ ಮೇಲೆ ಫೋರ್ ಬಾರಿಸಿದ್ದಾರೆ. ಇನ್ನು ಸಿಕ್ಸರ್ ಬಾರಿಸಲಿ ಎಂದು ಆಶಿಸಿದರು. ನಮ್ಮ ರಾಜ್ಯದಲ್ಲಿ ಬರದ ಸಮಸ್ಯೆ ಇದೆ. ಕೇಂದ್ರ ಸರಕಾರ ನೆರವಿಗೆ ಬರಲಿ ಎಂದು ಸೋನಿಯಾ ಅವರಲ್ಲಿ ಮನವಿ ಮಾಡಿದರು. ಎಸ್.ಎಂ. ಕೃಷ್ಣ ಅವರು ಸಿಎಂ ಆಗಿದ್ದಾಗ, ಗುರುವಂದನೆ ಸಮಾರಂಭದಲ್ಲಿ 'ನಾವೆಲ್ಲ ನಮ್ಮ ಒಂದೊಂದು ದಿನವನ್ನು ಶ್ರೀಗಳಿಗೆ ಕೊಡೋಣ' ಎಂದು ಹೇಳಿದ್ದನ್ನು ಸ್ಮರಿಸಿದರು. ದೇಶದಿಂದ ಭಯೋತ್ಪಾದನೆ ಹೋಗಬೇಕು, ಶಾಂತಿ ನೆಲಸಬೇಕೆಂದರು.

### *ಸೀರೆ ಕಾಣಿಕೆ : ಮಾತೆ ಅಭಿಧಾನ*

ಸೋನಿಯಾ ಗಾಂಧಿಯವರನ್ನು ತಮ್ಮ ಭಾಷಣದಲ್ಲಿ **'ಮಾತೆ'** ಎಂದು ಬಣ್ಣಿಸಿದ ಸಿದ್ಧಗಂಗಾ ಶ್ರೀಗಳು. ರಾಷ್ಟ್ರದ ಉನ್ನತ ಸ್ಥಾನಕ್ಕೇರಿರುವ ಸೋನಿಯಾ ಅವರು ವಿಶ್ವಮಟ್ಟಕ್ಕೇರುವ ಸಾಧನೆ ಮಾಡಲಿ. ಒಳ್ಳೆಯ ಆರೋಗ್ಯ, ಸಂತೋಷವನ್ನು ದೇವರು ಅವರಿಗೆ ದಯಪಾಲಿಸಲಿ ಎಂದು ಆಶೀರ್ವದಿಸಿದರು. ಶಾಲು ಹೊದಿಸಿ ಸನ್ಮಾನಿಸಿ, ಕಾಂಚೀಪುರಂ ಸಿಲ್ಕ್ ಸೀರೆ ಉಡುಗೊರೆ ನೀಡಿದರು. ಬೆಂಗಳೂರಿನ ವಿಕ್ಟೋರಿಯಾ ಲೇಔಟ್‌ನಲ್ಲಿ ಚಿನ್ನಿ ನಂಜಪ್ಪ ಎಂಬ ಹಿರಿಯ ಮಹಿಳೆ ಚಿಕ್ಕದಾದ ಸೀರೆ ಅಂಗಡಿ ಇಟ್ಟುಕೊಂಡಿದ್ದು ಈ ಹಿಂದೆ ಇದೇ ಅಂಗಡಿಯಿಂದ ಇಂದಿರಾ ಗಾಂಧಿ ಅವರು ಸೀರೆ ಕೊಂಡೊಯ್ಯುತ್ತಿದ್ದರು. ಅದೇ ಅಂಗಡಿಯಿಂದ ತಿಳಿಗೆಂಪು (ಪಿಂಕ್) ಬಣ್ಣದ ಸೀರೆ ತಂದು ಸೋನಿಯಾಗೆ ಉಡುಗೊರೆ ಯಾಗಿ ನೀಡಲಾಗಿದೆ.

### *ಲಕ್ಷ ಮೀರಿದ ಜನಸಾಗರ*

ಸಮಾರಂಭಕ್ಕೆ ಲಕ್ಷಕ್ಕೂ ಮಿಗಿಲಾಗಿ ಜನಸಾಗರ ಸೇರಿತ್ತು. ಸಮಾರಂಭ ನಡೆದ ಶ್ರೀ ಗೋಸಲ ಸಿದ್ಧೇಶ್ವರ ವೇದಿಕೆ ಮಂಟಪದಲ್ಲಿನ ಆಸನಗಳೆಲ್ಲ ಭರ್ತಿಯಾಗಿ ಪೆಂಡಾಲ್ ಹೊರಗಡೆಯೂ ಸಾವಿರಾರು ಸಂಖ್ಯೆಯಲ್ಲಿ ಭಕ್ತರು ಜಮಾಯಿಸಿ ಬಿಸಿಲಲ್ಲೇ ಸಮಾರಂಭ ವೀಕ್ಷಿಸಿದರು. ಜನಸಾಗರಕ್ಕೆ ಕುಡಿಯುವ ನೀರು ಸಿಗದಿದ್ದರೂ, ದಾಸೋಹಕ್ಕೆ ಮಾತ್ರ ಯಾವುದೇ ತೊಂದರೆಯಾಗಲಿಲ್ಲ.

### *ದೇಜಗೌಗೆ ಸಿದ್ಧಗಂಗಾ ಶ್ರೀ ಪ್ರಶಸ್ತಿ*

ಸಿದ್ಧಗಂಗಾಮಠದಲ್ಲಿ ಶನಿವಾರ ನಡೆದ ಡಾ॥ ಶಿವಕುಮಾರ ಸ್ವಾಮಿಜಿ ೧೦೫ನೇ ಜನ್ಮದಿನೋತ್ಸವ ಹಾಗೂ ಗುರುವಂದನಾ





ಮಹೋತ್ಸವದ ಧಾರ್ಮಿಕ ಸಮಾರಂಭದಲ್ಲಿ ಶ್ರೀಮಠದ ಹಳೆಯ ವಿದ್ಯಾರ್ಥಿಗಳ ಮತ್ತು ಹಿತೈಷಿಗಳ ಸಂಘದಿಂದ ನಾಡೋಜ ಡಾ. ದೇ. ಜವರೇಗೌಡ ಅವರಿಗೆ **'ಸಿದ್ಧಗಂಗಾಶ್ರೀ'** ಪ್ರಶಸ್ತಿ ಪ್ರದಾನ ಮಾಡಿ ಗೌರವಿಸಲಾಯಿತು.

ಶತಾಯುಷಿ ಡಾ॥ ಶ್ರೀ ಶಿವಕುಮಾರಸ್ವಾಮೀಜಿ ಪ್ರಶಸ್ತಿ ಪ್ರದಾನ ಮಾಡಿದರು. ನಾಡೋಜ ದೇ. ಜವರೇಗೌಡ ಅವರು ಪ್ರಶಸ್ತಿ ಸ್ವೀಕರಿಸಿ ಮಾತನಾಡಿ, ಪವಿತ್ರ ಸಿದ್ಧಗಂಗಾ ಕ್ಷೇತ್ರದಲ್ಲಿ ಆಧುನಿಕ ಕಲ್ಯಾಣವನ್ನು ಕಂಡಿದ್ದೇನೆ. ಬಸವಾದಿ ಶರಣರ ಆತ್ಮಜ್ಯೋತಿಯೂ ಸಂಸ್ಪರ್ಶವನ್ನು ಅನುಭವಿಸಿದ್ದು, ಅರ್ಧ ಶತಮಾನದಿಂದ ಶ್ರೀಗಳ ಆಶೀರ್ವಾದಕ್ಕೆ ಪಾತ್ರನಾಗಿರುವುದು ನನ್ನ ಭಾಗ್ಯ ಎಂದರು. ಕರ್ನಾಟಕರತ್ನ ಪ್ರಶಸ್ತಿ ಲಭಿಸಿದ ಸಂದರ್ಭದಲ್ಲಿ ಶ್ರೀಗಳು ಬರೆದ ಆಶೀರ್ವಾದ ರೂಪದ ಪತ್ರ ನನಗೆ ಶಿವರಕ್ಷೆ ಮಾತ್ರವಲ್ಲ ಮಂತ್ರದೀಕ್ಷೆಯಾಗಿದೆ ಎಂದರು. ಕತ್ತಲಿನಿಂದ ಬೆಳಕಿನೆಡೆಗೆ ಕರೆದೊಯ್ದ ೧೨ನೇ ಶತಮಾನದ ಬಸವಣ್ಣ ಅವರನ್ನು ಪ್ರಸ್ತುತ ಸಿದ್ಧಗಂಗಾಶ್ರೀಗಳ ಮೂಲಕ ನಾವು ಕಾಣುತ್ತಿದ್ದೇವೆ. ಸಿದ್ಧಗಂಗಾ ಶ್ರೀಗಳ ಮಂದಹಾಸ, ಕಾಯಕ ನಮಗೆಲ್ಲರ ಬದುಕಿಗೆ ಆದರ್ಶಪ್ರಾಯ. ಜಾತಿ ಭೇದವಿಲ್ಲದೆ ತ್ರಿವಿಧ ದಾಸೋಹಗಳನ್ನು ನಡೆಸುತ್ತಿರುವ ಶ್ರೀಗಳ ಮಾರ್ಗದರ್ಶನ ಅಗತ್ಯ ಎಂದ ಅವರು, ಅಸ್ಪೃಶ್ಯತೆ ನಿವಾರಣೆ, ಧಾರ್ಮಿಕತೆ, ಆರ್ಥಿಕ ಸಮಾನತೆಗಾಗಿ ಹೋರಾಡಿದ ಬಸವಣ್ಣನವರಂಥ ಪುಣ್ಯಪುರುಷರ ನಾಡಲ್ಲಿ ಇಂದು ಭ್ರಷ್ಟಾಚಾರ, ಅಧರ್ಮ ಎಲ್ಲೆ ಮೀರಿರುವುದು ದುರದೃಷ್ಟಕರ ಎಂದು ವಿಷಾದಿಸಿದರು.

### *ಗ್ರಂಥಗಳ ಬಿಡುಗಡೆ*

ಧಾರ್ಮಿಕ ಸಮಾರಂಭದಲ್ಲಿ **'ಅನುಭಾವಪಥ'** ಗ್ರಂಥವನ್ನು ನಿಡಸೋಸಿ ಪಂಚಮ ಶಿವಲಿಂಗೇಶ್ವರ ಸ್ವಾಮೀಜಿ, **'ಯುಗಗಂಗಾ'** ಗ್ರಂಥವನ್ನು ಬೇಲಿಮಠದ ಶಿವಾನುಭವ ಚರಮೂರ್ತಿ ಶಿವರುದ್ರಸ್ವಾಮೀಜಿ, ಅವರು ಉರ್ದು ಭಾಷೆಯಲ್ಲಿ ಬರೆದ **'ಪೀಪಲ್ ಕಾ ಪೇಡ್'** ಗ್ರಂಥವನ್ನು ಡಾ॥ ಮುಮ್ತಾಜ್ ಅಹಮದ್ ಖಾನ್ ಬಿಡುಗಡೆ ಮಾಡಿದರು.

### *ಸನ್ಮಾನ*

ಬೆಂಗಳೂರು ಎಂಎಸ್‌ಐಎಲ್ ಅಧ್ಯಕ್ಷ ವಿಕ್ರಂ ವಿ. ಪಾಟೀಲ್ ಹಾಗೂ ಜನಪದ ಗಾಯಕ ಡಾ॥ ಬಾನಂದೂರು ಕೆಂಪಯ್ಯ ಅವರನ್ನು ಡಾ॥ ಶಿವಕುಮಾರಸ್ವಾಮಿ ಪ್ರಶಸ್ತಿ ನೀಡಿ ಸನ್ಮಾನಿಸಿದರು.

### *ಜಾತ್ಯಾತೀತ ಸಮ್ಮೇಳನ*

ಶ್ರೀಮಠದಲ್ಲಿ ನಡೆದ ಧಾರ್ಮಿಕ ಸಮ್ಮೇಳನದ ವೇದಿಕೆಯಲ್ಲಿ ಹಿಂದೂ, ಕ್ರೈಸ್ತ, ಮುಸ್ಲಿಂ ಧರ್ಮದ ಮುಖಂಡರನ್ನು ಒಂದೇ ವೇದಿಕೆಯಲ್ಲಿ ಕರೆತರುವ ಮೂಲಕ ಜಾತ್ಯಾತೀತ ಧರ್ಮ ಸಮಾವೇಶವನ್ನಾಗಿ ಆಚರಿಸಲಾಯಿತು. ಸಮಾವೇಶ ಮತ್ತು ದಾಸೋಹದಲ್ಲಿ ಹಲವೆಡೆಯಿಂದ ಬಂದ ಎಲ್ಲ ಧರ್ಮದ ಬಂಧುಗಳು ಪಾಲ್ಗೊಂಡಿದ್ದು ವಿಶೇಷವಾಗಿತ್ತು. ಮಠಾಧೀಶ ಡಾ॥ ಶ್ರೀ ಶಿವಕುಮಾರಸ್ವಾಮಿಜಿ ಸಾನ್ನಿಧ್ಯ ವಹಿಸಿದ್ದರು. ಕಿರಿಯ ಶ್ರೀಗಳಾದ ಸಿದ್ಧಲಿಂಗ ಸ್ವಾಮೀಜಿ ಉಪಸ್ಥಿತರಿದ್ದರು.

*(ಕೃಪೆ : ವಿಜಯಕರ್ನಾಟಕ, ದಿನಾಂಕ : ೨೯.೪.೨೦೧೨)*

## ಶ್ರೀವಾಣಿ

ಸುಮಾರು ಎಂಟು ನೂರು ವರ್ಷಗಳ ಹಿಂದೆ ಕರ್ನಾಟಕದಲ್ಲಿ ಜನ್ಮತಾಳಿದ ಬಸವಣ್ಣನವರು ಚಿಕ್ಕವಯಸ್ಸಿನಿಂದಲೂ ಉದಾತ್ತ ಮನೋಭಾವವುಳ್ಳವರಾಗಿ ದಿನಚರಿಯ ಸಾಮಾಜಿಕ ಜೀವನದಲ್ಲಿ ನಡೆಯುತ್ತಿರುವ ಅನ್ಯಾಯಗಳ ವಿರುದ್ಧ ಪ್ರಬಲ ಹೋರಾಟ ನಡೆಸಿದ ಧೀಮಂತ ವ್ಯಕ್ತಿ. ಧರ್ಮದ ಹೆಸರಿನಲ್ಲಿ ಪ್ರಚಲಿತವಾಗಿದ್ದ ಶೋಷಣೆ, ಮೇಲು ಕೀಳುಗಳೆಂಬ ಕಲ್ಪನೆ, ದೀನದಲಿತರ ದಮನ ಮುಂತಾದ ಅನ್ಯಾಯಗಳನ್ನು ಹೋಗಲಾಡಿಸಲು ತಮ್ಮ ಜೀವನವನ್ನೇ ಮುಡಿಪಾಗಿಟ್ಟರು. ಶ್ರೇಷ್ಠವಾದ ಮಾನವೀಯ ಮೌಲ್ಯಗಳನ್ನು ಎತ್ತಿಹಿಡಿದು ಅವುಗಳನ್ನು ಅಳವಡಿಸಿಕೊಂಡು ಎಲ್ಲ ವ್ಯಕ್ತಿಯೂ ಉದ್ಧಾರವಾಗುವುದು ಸಾಧ್ಯವೆನ್ನುವ ಆತ್ಮವಿಶ್ವಾಸವನ್ನು ಮೂಡಿಸಿ ಸಕಲರನ್ನು ಉದ್ಧಾರ ಮಾಡಿದ ಮಹಾತ್ಮ. ಒಟ್ಟಿನಲ್ಲಿ ಶ್ರೇಷ್ಠವರ್ಗದ ಮಾನವತಾವಾದಿಯಾಗಿ ಜಗತ್ತಿನ ಮನುಕುಲದ ಸಮಸ್ಯೆಗಳನ್ನು ಪರಿಹರಿಸಲು ಹೆಣಗಾಡಿದ ಮಹಾನುಭಾವರು ಅವರು.

# ಸೋನಿಯಾ ಶರಣು ಶರಣಾರ್ಥಿ

## ಶ್ರೀಗಳ ಕೈಂಕರ್ಯದ ಗುಣಗಾನ

ತ್ರಿವಿಧ ದಾಸೋಹದ ಮೂಲಕ ಮೌನ ಕಾಯಕ ಮಾಡುತ್ತಿರುವ ಸಿದ್ಧಗಂಗಾ ಶ್ರೀಗಳ ದರ್ಶನ ಪಡೆಯಬೇಕು, ಕಾರ್ಯ ತನ್ಮಯತೆಯನ್ನು ನೋಡಬೇಕು ಎಂಬ ತಮ್ಮ ಬಹುದಿನಗಳ ಆಸೆ ಇಂದು ಈಡೇರಿದೆ. ವಿದ್ಯಾರ್ಥಿ, ಯುವಜನರನ್ನು ಶೈಕ್ಷಣಿಕ ಪ್ರಜ್ಞಾವಂತರನ್ನಾಗಿ ಮಾಡಿ, ಆ ಮೂಲಕ ದೇಶದ ಸವಾಲುಗಳನ್ನು ಸಮರ್ಥವಾಗಿ ಎದುರಿಸುವ ಪ್ರಭುದ್ಧರನ್ನು ದೇಶಕ್ಕೆ ಶ್ರೀಗಳು ಕೊಡುಗೆಯಾಗಿ ನೀಡಿದ್ದಾರೆ ಎಂದು ಎಐಸಿಸಿ ಅಧ್ಯಕ್ಷೆ ಸೋನಿಯಾ ಗಾಂಧಿ ಬಣ್ಣಿಸಿದರು. ಶ್ರೀ ಸಿದ್ಧಗಂಗಾ ಮಠದಲ್ಲಿ ಏರ್ಪಡಿಸಿದ್ದ ಡಾ|| ಶ್ರೀ ಶಿವಕುಮಾರಸ್ವಾಮೀಜಿ ಅವರ ೧೦೫ನೇ ಜನ್ಮದಿನೋತ್ಸವ ಮತ್ತು ಗುರುವಂದನಾ ಮಹೋತ್ಸವವನ್ನು ೧೦೫ ಜ್ಯೋತಿ ಬೆಳಗಿರುವ ಮೂಲಕ ಉದ್ಘಾಟಿಸಿ ಮಾತನಾಡಿದ ಅವರು, ಶೈಕ್ಷಣಿಕ ಪ್ರಜ್ಞೆಯಿಂದಲೇ ದೇಶವನ್ನು ಬಲಪಡಿಸುವ ಪ್ರಬಲ ಆಕಾಂಕ್ಷೆ ಹೊತ್ತಿರುವ ಶ್ರೀಗಳು ವಿಶ್ವಕ್ಕೆ ಮಾದರಿಯಾಗಿದ್ದಾರೆ. ಕಾಯಕತತ್ವದಡಿ ೮೦ ವರ್ಷಗಳಿಂದ ಶ್ರೀಗಳು ಸಲ್ಲಿಸುತ್ತಿರುವ ಸೇವೆ ದೇಶದ ಇತರೆ ಧಾರ್ಮಿಕ ಕೇಂದ್ರಗಳಿಗೆ ಮತ್ತು ವಿಶ್ವಕ್ಕೆ ಮಾದರಿಯಾಗಿದ್ದಾರೆ ಎಂದರು.

ಶಿಕ್ಷಣ ಶಾಲೆ, ಕಾಲೇಜಿಗೆ ಸೀಮಿತವಲ್ಲ. ಅದರಾಚೆಗೂ ಇರುವ ಜ್ಞಾನವನ್ನು ವಿಶಾಲ ಮನೋಭಾವ ಸೃಷ್ಟಿಯಾಗುತ್ತದೆ. ಆದ್ದರಿಂದ ಜಾತಿ, ಧರ್ಮಗಳಲ್ಲಿ ಒಡಕು ಉಂಟುಮಾಡದೆ ಏಕತೆ ಮೂಡಿಸುವ ಕಾಯಕ. ಅಂತಹ ಮನೋಭಾವದಿಂದ ಮಾತ್ರ ಸಾಧ್ಯ. ಮನುಕುಲದ ಏಳಿಗೆ ಶಿಕ್ಷಣದಿಂದ ಮಾತ್ರ ಎಂದು ತೋರಿಸಿಕೊಟ್ಟಿರುವ ಶ್ರೀಗಳು ದುರ್ಬಲ ವರ್ಗದ ಲಕ್ಷಾಂತರ ಮಕ್ಕಳಿಗೆ ವಿದ್ಯೆಯ ಜೊತೆಗೆ ಅನ್ನ, ವಸತಿ ನೀಡಿ ಪೋಷಿಸಿದ್ದಾರೆ. ಹಾಗೆ ಪೋಷಣೆಗೊಂಡ ಮಕ್ಕಳು ದೇಶ ಕಟ್ಟುವ ಕಾರ್ಯಕ್ಕೆ ಮಹತ್ತರ ಕೊಡುಗೆ ನೀಡುತ್ತಿದ್ದಾರೆ. ಬಸವಾದಿ ಶರಣರ ತತ್ತ್ವ ಚಿಂತನೆಗಳು ಸಾಕಾರಗೊಂಡಿರುವ ಸಿದ್ಧಗಂಗಾಮಠದಲ್ಲಿ ಆಧ್ಯಾತ್ಮಿಕ ನೆಲೆಗಟ್ಟು ಎಲ್ಲಾ ಪ್ರಜ್ಞೆಗೂ ತಾಯಿಬೇರು ಆಗಿದೆ ಎಂದರು.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಧಾರ್ಮಿಕ ಕೇಂದ್ರಗಳು ಶಿಕ್ಷಣ ನೀಡುವ ಮೂಲಕ ಸರ್ಕಾರಗಳ ಹೊಣೆಯನ್ನು ಕಡಿಮೆ ಮಾಡಿವೆ. ಸಿದ್ಧಗಂಗಾ ಶ್ರೀಗಳು ಸೇರಿದಂತೆ ಕರ್ನಾಟಕ ರಾಜ್ಯದ ಬಹಳಷ್ಟು ಧಾರ್ಮಿಕ ಕೇಂದ್ರಗಳು, ಮಠಗಳು ಲಕ್ಷ, ಲಕ್ಷ ಮಂದಿ ವಿದ್ಯಾರ್ಥಿಗಳಿಗೆ ಶೈಕ್ಷಣಿಕ ಪ್ರಜ್ಞೆ, ಅರಿವು ಮೂಡಿಸಿ ಬಡತನ ನಿರ್ಮೂಲನೆ ಮಾಡುವಲ್ಲಿ ಹೆಚ್ಚು ಶ್ರಮ ವಹಿಸಿವೆ. ಅದಕ್ಕಾಗಿ ತಾವು ಅಭಿನಂದಿಸಿ ಪ್ರಶಂಸಿಸುತ್ತೇವೆ. ಶಿಕ್ಷಣದಿಂದ ಶೀಲ, ಚಾರಿತ್ರ್ಯ ಗುಣಮಟ್ಟದ ನಡತೆ ವ್ಯಕ್ತಿಯಲ್ಲಿ ರೂಪುಗೊಳ್ಳುತ್ತವೆ. ಆ ಮೂಲಕ ರಾಷ್ಟ್ರದ ಅಭಿವೃದ್ಧಿಗೆ ಬಹಳಷ್ಟು ಅನುಕೂಲವಾಗುತ್ತದೆ ಎಂದರು.

ವೇದಿಕೆಯಲ್ಲಿ ಉಪಸ್ಥಿತರಿದ್ದ ಸಿದ್ಧಗಂಗಾ ಮಠಾಧೀಶರಾದ ಡಾ|| ಶ್ರೀ ಶಿವಕುಮಾರಸ್ವಾಮೀಜಿ, ಸುತ್ತೂರು ಮಠಾಧೀಶರಾದ ಶ್ರೀ ಶಿವರಾತ್ರಿ ದೇಶೀಕೇಂದ್ರ ಸ್ವಾಮೀಜಿ, ಆದಿಚುಂಚನಗಿರಿ ಮಠಾಧೀಶರಾದ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿ, ಸಿದ್ಧಗಂಗಾ ಮಠಾಧ್ಯಕ್ಷರಾದ ಶ್ರೀ ಸಿದ್ಧಲಿಂಗಸ್ವಾಮೀಜಿ ಅವರನ್ನು ಎಐಸಿಸಿ ಅಧ್ಯಕ್ಷೆ ಶ್ರೀಮತಿ ಸೋನಿಯಾ ಗಾಂಧಿ, ಕೆಪಿಸಿಸಿ ಅಧ್ಯಕ್ಷ ಡಾ|| ಜಿ. ಪರಮೇಶ್ವರ್, ಮಾಜಿ ಸಚಿವರಾದ ರಾಣಿಸತೀಶ್ ಮತ್ತಿತರರು ಶಾಲು ಹೊದಿಸಿ, ಫಲತಾಂಬೂಲ ನೀಡಿ ಗೌರವಿಸಿದರು.

### *ಅಧಿಕಾರಿಗಳಿಗೆ ಶ್ರೀಗಳ ಕಿವಿಮಾತು*

ರಾಜ್ಯಕ್ಕೆ ಬರ ಬಂದಿದೆ. ಪ್ರತಿಯೊಬ್ಬರಿಗೂ ಮೂಲಸೌಕರ್ಯ ಕಲ್ಪಿಸಬೇಕು. ಆದ್ದರಿಂದ ಅಧಿಕಾರಸ್ಥರು ತಮ್ಮ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸಬೇಕು. ಕರ್ತವ್ಯದಲ್ಲಿ ಪ್ರಾಮಾಣಿಕತೆ ಇರಬೇಕು ಎಂದು ಸಿದ್ಧಗಂಗಾ ಮಠಾಧೀಶರಾದ ಡಾ|| ಶ್ರೀ ಶ್ರೀ ಶಿವಕುಮಾರಸ್ವಾಮೀಜಿ ಹೇಳಿದರು.

ಗುರುವಂದನೆ ಸ್ವೀಕರಿಸಿ ಆಶೀರ್ವಚನ ನೀಡಿದ ಶ್ರೀಗಳು, ಭ್ರಷ್ಟತೆ, ಭಯೋತ್ಪಾದನೆ ನಿಗ್ರಹವಾಗಬೇಕು. ಭಾರತೀಯ ಪ್ರಜ್ಞೆಯಿಂದಿಗೆ ಎಲ್ಲಾ ಭಾರತೀಯರು ಸಮಾನತೆ ಮತ್ತು ಶಾಂತಿ, ನೆಮ್ಮದಿಗೆ ಕಾರಣವಾಗಬೇಕು. ಆದ್ದರಿಂದ ಆಧ್ಯಾತ್ಮಿಕ ಪ್ರಜ್ಞೆ, ಕಾಯಕತ್ವದಿಂದ ಪ್ರತಿಯೊಬ್ಬ ವ್ಯಕ್ತಿ ತನ್ನ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸಬೇಕು. ಆರ್ಥಿಕ ಸಮಾನತೆ ಎಲ್ಲಾ ವರ್ಗ, ಧರ್ಮಗಳಲ್ಲೂ ಬೆಳೆದರೆ ಪ್ರತಿಯೊಬ್ಬ ವ್ಯಕ್ತಿ ಉನ್ನತ ಸಮಾಜದ ಅಭಿವೃದ್ಧಿಗೆ ಕಾರಣವಾಗುತ್ತಾನೆ ಎಂದರು. ಒಂದು ಕಾಲದಲ್ಲಿ ಜಗತ್ತಿನ ಬಹಳಷ್ಟು ರಾಷ್ಟ್ರಗಳು ಅನಾಗರಿಕವಾಗಿದ್ದಾಗ ಭಾರತ ದೇಶ ನಾಗರಿಕತೆಯ ಸೂಕ್ಷ್ಮತೆಗಳನ್ನು ವಿಶ್ವಕ್ಕೆ ಕೊಡುಗೆಯಾಗಿ ನೀಡಿದ್ದನ್ನು ಮರೆಯುವಂತಿಲ್ಲ. ಇಂದು ವಿಜ್ಞಾನ, ತಂತ್ರಜ್ಞಾನ ಅತಿವೇಗವಾಗಿ





ಬೆಳೆಯುತ್ತಿದೆ. ಇಂತಹ ಸಂದರ್ಭದಲ್ಲಿ ಮನುಷ್ಯ ಹಣದ ಬೆನ್ನು ಬಿದ್ದು ಶಾಂತಿ ನೆಮ್ಮದಿ ಕಳೆದುಕೊಳ್ಳುತ್ತಾನೆ. ಕುಟುಂಬ ವಿಘಟನೆಗಳು ಹೆಚ್ಚುತ್ತಿವೆ. ಇದಕ್ಕೆಲ್ಲಾ ಕಾರಣ ಶಾಂತಿ ಇಲ್ಲದಿರುವುದು. ರೈತರು, ಬಡವರು ಮಳೆ, ಬೆಳೆ ಇಲ್ಲದೆ ಅಸಹಾಯಕ ಸ್ಥಿತಿಯಲ್ಲಿರುವ ರಾಜಕಾರಣಿಗಳು, ಅಧಿಕಾರಿಗಳು ತಮ್ಮ ಹೊಣೆಯನ್ನು ನಿರ್ಲಕ್ಷಿಸಬಾರದು. ಸಮರ್ಥವಾಗಿ ಅವರ ಸಹಾಯಕ್ಕೆ ಅನುಕೂಲ ಕಲ್ಪಿಸಬೇಕು ಎಂದರು.

### *ನೋವು ನುಂಗಿ ನಾಡಿಗೆ ಜ್ಯೋತಿ*

ಕಳೆದ ೮೦ ವರ್ಷಗಳಿಂದ ಕಾಲಕಾಲಕ್ಕೆ ಬಂದ ನೋವುಗಳನ್ನು ನುಂಗಿ, ನಾಡಿನ ಜ್ಯೋತಿಯಾಗಿರುವ ತ್ಯಾಗಮೂರ್ತಿ ಡಾ|| ಶ್ರೀ ಶಿವಕುಮಾರಸ್ವಾಮಿಜಿ ಜಾಗತಿಕ ಮಟ್ಟದಲ್ಲಿ ಶ್ರೀಮಠವನ್ನು ತಮ್ಮ ಕಾಯಕ ತತ್ತ್ವದಿಂದ ಚಿರಸ್ಥಾಯಿಯಾಗಿಸಿದ್ದಾರೆ ಎಂದು ಸುತ್ತೂರು ಮಠದ ಅಧ್ಯಕ್ಷರಾದ ಶ್ರೀ ಶಿವರಾತ್ರೀದೇಶೀಕೇಂದ್ರ ಸ್ವಾಮೀಜಿ ಬಣ್ಣಿಸಿದರು. ಸಿದ್ಧಗಂಗಾ ಮಠದ ಆವರಣದಲ್ಲಿ ಭಕ್ತಾದಿಗಳು ಏರ್ಪಡಿಸಿದ್ದ ಡಾ|| ಶ್ರೀ ಶ್ರೀ ಶಿವಕುಮಾರಸ್ವಾಮಿಜಿ ಅವರ ೧೦೫ನೇ ಜನ್ಮದಿನೋತ್ಸವ ಹಾಗೂ ಗುರುವಂದನಾ ಮಹೋತ್ಸವದ ದಿವ್ಯ ಅಧ್ಯಕ್ಷತೆ ವಹಿಸಿ ಮಾತನಾಡಿದ ಶ್ರೀಗಳು, ತಮ್ಮ ಕಾಯಕತತ್ವದಿಂದ ಶ್ರೀಮಠಕ್ಕೆ ಘನತೆ, ಗೌರವಗಳು ತರುವುದರ ಜೊತೆಗೆ ಶ್ರೀಮಠದ ಕಾರ್ಯ ಇತರೆ ಮಠಗಳಿಗೆ ಆದರ್ಶವಾಗುವಂತೆ ನೋಡಿಕೊಂಡಿದ್ದಾರೆ. ೮೦ ವರ್ಷಗಳ ಹಿಂದೆ ಶ್ರೀಗಳು ಪೀಠಾರೋಹಣ ಮಾಡುವಾಗ ಮಠದಲ್ಲಿ ಹಣವಿರಲಿಲ್ಲ. ಯಾರೋ ಒಬ್ಬ ಭಕ್ತ ನೂರು ಬೆಳ್ಳಿ ನಾಣ್ಯಗಳನ್ನು ನೀಡುವ ಮೂಲಕ ಕಾಯಕತತ್ವಕ್ಕೆ ಕಾರಣನಾದ ಎಂದರು.

ಆಧುನಿಕ ಸಂದರ್ಭದಲ್ಲಿ ನಮ್ಮ ದೇಶ ಹಲವಾರು ಸಮಸ್ಯೆಗಳಿಂದ ನರಳುತ್ತಿದೆ. ಆದರೆ ಆಧ್ಯಾತ್ಮಿಕ ನೆಲೆಗಟ್ಟು ಇರುವುದರಿಂದ ದೇಶದಲ್ಲಿ ಇನ್ನೂ ಶಾಂತಿ, ನೆಮ್ಮದಿ ಇದೆ. ನೆರೆರಾಜ್ಯಗಳಿಗೆ ಹೋಲಿಸಿದರೆ ಮಿಲಿಟರಿ ಸರ್ಕಾರ ಅಥವಾ ಸರ್ವಾಧಿಕಾರಿ ಸರ್ಕಾರ ನಮ್ಮ ದೇಶದಲ್ಲಿ ನೆಲೆಸಲು ಸಾಧ್ಯವೇ ಇಲ್ಲ. ಸಮಾಜಮುಖಿಯಾಗಿರುವ ಶ್ರೀಗಳು ಮಠದಲ್ಲಿ ಓದುವ ಪ್ರತಿಯೊಂದು ವಿದ್ಯಾರ್ಥಿಗೂ ಭಾರತೀಯ ತತ್ವ, ವಿಚಾರಧಾರೆಗಳನ್ನು ಧಾರೆ ಎರೆಯುತ್ತಿದ್ದಾರೆ. ಇಂತಹ ಸಂದರ್ಭದಲ್ಲೂ ಭ್ರಷ್ಟಾಚಾರ, ಭಯೋತ್ಪಾದನೆ ಎಲ್ಲೆ ಮೀರುತ್ತಿದೆ. ಹೀಗಾಗಿ ಎಲ್ಲಾ ವರ್ಗದ ಜಾತಿ, ಧರ್ಮಗಳಲ್ಲಿನ ಜನರು ಸಜ್ಜನರಾಗಬೇಕು. ಅಂತಹ ಸಜ್ಜನರ ಸಂಖ್ಯೆ ನೂರು ಪಟ್ಟಾಗಬೇಕು. ದುರ್ಜನರನ್ನು ಸಜ್ಜನರನ್ನಾಗಿಸುವ ವಾತಾವರಣ ಬೆಳೆಯಬೇಕು ಎಂದರು.

ಆದಿಚುಂಚನಗಿರಿ ಮಠದ ಅಧ್ಯಕ್ಷರಾದ ಡಾ|| ಶ್ರೀ ಬಾಲಗಂಗಾಧರನಾಥ ಸ್ವಾಮೀಜಿ ದಿವ್ಯಉಪಸ್ಥಿತಿ ವಹಿಸಿ, ಆಶೀರ್ವಚನ ನೀಡಿ ತ್ರಿವಿಧ ದಾಸೋಹಿಗಳಾದ ಸಿದ್ಧಗಂಗಾ ಶ್ರೀಗಳು ಭವ್ಯಭಾರತವನ್ನು ನಿರ್ಮಿಸುವ ಭವಿಷ್ಯದ ಪ್ರಜೆಗಳನ್ನು ಧರ್ಮ, ನ್ಯಾಯ, ನೀತಿವಂತರಾಗಿ ಮಾಡುತ್ತಿದ್ದಾರೆ. ಶ್ರೀಮಠದ ಕಾಯಕತತ್ವದಿಂದ ತಾವೂ ಸೇರಿದಂತೆ ಇತರೆ ಎಲ್ಲಾ ಮಠಾಧೀಶರು ಪ್ರಭಾವಿತರಾಗಿ ಅನುಸರಿಸುತ್ತಿದ್ದೇವೆ. ಕಾಂಗ್ರೆಸ್ ಪಕ್ಷದ ಅಧಿನಾಯಕಿ ಸೋನಿಯಾಗಾಂಧಿ ಭವ್ಯಭಾರತ ನಿರ್ಮಿಸುವ ಪ್ರಯತ್ನಕ್ಕೆ ತಾವೂ ಸೇರಿದಂತೆ ಸಿದ್ಧಗಂಗಾಶ್ರೀಗಳು ಶುಭ ಹಾರೈಸಿ, ಗೌರವ ಸಲ್ಲಿಸಲಾಗಿದೆ. ಸುತ್ತೂರು ಮಠಾಧೀಶರು ದೇಶ, ವಿದೇಶಗಳಲ್ಲಿ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸುವ ಮೂಲಕ ಭವಿಷ್ಯದಲ್ಲಿ ಉತ್ತಮ ಪ್ರಜೆಗಳನ್ನು ರೂಪಿಸುವ ಪ್ರಯತ್ನ ನಡೆಸುತ್ತಿದ್ದಾರೆ ಎಂದು ಪ್ರಶಂಶಿಸಿದರು.

ಶ್ರೀ ಸಿದ್ಧಗಂಗಾ ಮಠದ ಅಧ್ಯಕ್ಷರಾದ ಶ್ರೀ ಸಿದ್ಧಲಿಂಗಸ್ವಾಮೀಜಿ ಭಕ್ತಿಸಮರ್ಪಣೆ ಮಾಡಿ ೧೦೫ ಜ್ಯೋತಿಗಳನ್ನು ಬೆಳಗಿಸುವ ಮೂಲಕ ಶ್ರೀಗಳಿಗೆ ನಾವೆಲ್ಲಾ ಗೌರವ ಸಲ್ಲಿಸಿದ್ದೇವೆ. ತಪೋನಿಷ್ಠರಾದ ಶ್ರೀಗಳು ಸಹಸ್ರ, ಸಹಸ್ರ ಜ್ಯೋತಿಗಳು ದೇಶ, ವಿದೇಶಗಳಲ್ಲಿ ಬೆಳಗುವಂತೆ ತ್ರಿವಿಧ ದಾಸೋಹದ ಮೂಲಕ ರೂಪುಗೊಳಿಸಿದ್ದಾರೆ. ಎಸ್.ಎಂ. ಕೃಷ್ಣ ಮುಖ್ಯಮಂತ್ರಿಯಾಗಿದ್ದ ಸಂದರ್ಭದಲ್ಲಿ ಅಕ್ಷರ ದಾಸೋಹ ವ್ಯವಸ್ಥೆಯನ್ನು ರಾಜ್ಯದಲ್ಲಿ ತರುವಂತೆ ಪ್ರೇರೇಪಿಸುವಲ್ಲಿ ಶ್ರೀಗಳ ಕಾಯಕ ಮತ್ತು ದಾಸೋಹ ತತ್ತ್ವ ಕಾರಣವಾಗಿದೆ. ಲೋಕಕಲ್ಯಾಣಕ್ಕಾಗಿ ತ್ರಿವಿಧ ದಾಸೋಹದ ಮೂಲಕ ಲೋಕದ ಬೆಳಕಾಗಿರುವ ಶ್ರೀಗಳನ್ನು ಎಷ್ಟು ಬಣ್ಣಿಸಿದರೂ ಸಾಲದು ಎಂದರು.

ಈ ಸಂದರ್ಭದಲ್ಲಿ ಡಾ|| ಶ್ರೀ ಶಿವಕುಮಾರಸ್ವಾಮೀಜಿ ಅವರನ್ನು ಚಕ್ರಬಾವಿ ಮಠದ ಶ್ರೀ ಸಿದ್ಧಲಿಂಗಸ್ವಾಮೀಜಿ, ನಿವೃತ್ತ ಪೊಲೀಸ್ ಅಧಿಕಾರಿ ಶ್ರೀ ರೇವಣಸಿದ್ಧಯ್ಯ ಸನ್ಮಾನಿಸಿದರು. ಶಾಸಕ ಶ್ರೀ ಶ್ಯಾಮನೂರು ಶಿವಶಂಕರಪ್ಪ ಶ್ರೀಗಳ ೧೦೫ನೇ ಜನ್ಮದಿನೋತ್ಸವದ ಅಂಗವಾಗಿ ೧೦೫ ಲಕ್ಷ ರೂಗಳನ್ನು ಎಐಸಿಸಿ ಅಧ್ಯಕ್ಷೆ ಸೋನಿಯಾಗಾಂಧಿ ಮೂಲಕ ದೇಣಿಗೆಯನ್ನು ನೀಡಿದರು. ಡಾ|| ಜಯಣ್ಣ ಸ್ವಾಗತಿಸಿ, ಡಾ|| ಎಂ.ಎನ್. ಚನ್ನಬಸಪ್ಪ ಸಿದ್ಧಗಂಗಾಮಠ ಮತ್ತು ಶ್ರೀಗಳನ್ನು ಕುರಿತು ಪರಿಚಯಿಸಿದರು. ಶಿಕ್ಷಣ ತಜ್ಞ ಪ್ರೊ. ಕೆ.ಇ. ರಾಧಾಕೃಷ್ಣ ಸೊಗಸಾಗಿ ಕಾರ್ಯಕ್ರಮ ನಿರೂಪಿಸಿದರು.

*(ಕೃಪೆ : ಸಂಯುಕ್ತ ಕರ್ನಾಟಕ, ದಿನಾಂಕ: ೨೯.೪.೨೦೧೨)*

# Seers shower praises on Sonia

The spotlight was on congress President Sonia Gandhi at the Guruvandana programme in Tumkur organised in honour of Shivakumara Swamiji of Siddaganga Math who turned 105 on April 1.

No doubt the programme was organised by the Math to pay obeisance to the Swamiji, who is considered as a living God for his service to mankind for the last many decades.

But with Sonia being the lone politician invited to share the dais with three Swamijis, the grand event took political overtones.

Various seers, who spoke at event, including Balagangadharanatha Swamiji of the Vokkaliga math - Adichunchanagiri and Siddalinga Swamiji, the Junior swami of Siddaganga Math, complimented Sonia.

Shivakumara Swamiji said he was happy that Sonia has made it convenient to visit the math and blessed her with good health and happiness.

Balagangadharanatha Swamiji said Sonia is building the nation and the entire country is looking towards her. She is a good worker, he said.

Sonia's presence at the Guruvandana as a VIP guest came as a blessing in disguise for the Congress, which is gearing up for the next Assembly elections. The party is keen to reconnect with the Lingayat community, while the math, on its part, is making a concious effort to dispel the notion that it had identified itself too closely with the BJP in general and Yeddyurappa in particular. The senior swamiji has a vast following among lingayats, a community that had distanced itself from the congress ever since the unceremonious removal of Veerendra Patil as Chief Minister in 1989.

Sonia, who was brimming with enthusiasm and smile, could easily strike a chord with the audience by opening her speech by uttering a few Kannada words -'Ellarigu Namaskara' and 'sharanu Sharanarthi' Neither the Swamiji nor Sonia Gandhi made any reference to politics or obliquely.

Almost all the top Congress leaders including Oscar Fernandes, S M Krishna, Mallikarjuna Kharge, K H Muniyappa and Madhusidana Mistry were present among the audience.

Sonia, who spent arround two hours at the math premises, had a brief one-on-one chat with the lingayat seer before the commencement of the event. She offered the seer a shawl, fruits an flowers. In her address, Sonia said the Swamiji exemplifies hard work and self-discipline. Lauding the role of the math in imparting education, Sonia stressed that education must inculcate in people respect towards the diversity of society.

On the occasion, the seer was presented with a cheque for Rs. 105 lakh to mark his 105th birthday celebrations. The purse was presented by Shamanur Shivasankarappa on behalf of various educational institutions, it is said.

Shivakumara Swamiji in his address said Bharata Khanda(India) treading on the paths of spirituality and dharma, should become a role model for other nations.

'In spite of breathtaking developments in science and technology, people all over the world are yearning for peace in the face of terrorism, violence, strife, hunger and so many other ills' he said. Shivarathri Deshikendra Swamiji of Suttur Math also spoke on the occasion.

***(Courtesy : Deccan Herald, Date : 29.4.2012)***







# ಶತಮಾನದ ಶ್ರೀಮದ್ವಿಭೂತಿ

**– ನಾಡೋಜ ಚೆನ್ನವೀರ ಕಣವಿ**
'ಚೆಂಬೆಳಕು', ೯ನೆಯ ಅಡ್ಡರಸ್ತೆ, ಕಲ್ಯಾಣನಗರ,
ಧಾರವಾಡ – ೫೮೦ ೦೦೭.

**ನಾ**ನು ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದಾಗ ನಾಲ್ಕು ವರ್ಷ ಧಾರವಾಡದ ಮುರುಘಾಮಠದ ಪ್ರಸಾದ ನಿಲಯ ನನಗೆ ಆಶ್ರಯ ಒದಗಿಸಿತ್ತು. ಭಕ್ತಿಯ ತವರು ಮನೆಯಂತಿದ್ದ ಮಠದ ಮೃತ್ಯುಂಜಯ ಸ್ವಾಮಿಗಳು ವಿದ್ಯಾರ್ಥಿಗಳೇ ತಮ್ಮ ಸರ್ವಸ್ವವೆಂದು ಭಾವಿಸಿದವರು. ಸದಾ ಸಮಾಜದ ಹಿತ ಚಿಂತನೆಯಲ್ಲಿಯೇ ಸೇವಾನಿರತರಾಗಿರುತ್ತಿದ್ದ ಅವರನ್ನು ಸಾಮಾನ್ಯವಾಗಿ ಎಲ್ಲರೂ 'ಮೃತ್ಯುಂಜಯ ಅಪ್ಪಗಳು' ಎಂದೇ ಕರೆಯುತ್ತಿದ್ದರು. ಸ್ವಾಮಿಯ ಹಿರಿತನವನ್ನು ಅವರೆಂದೂ ಆಹ್ವಾನಿಸಿಕೊಂಡಿರಲಿಲ್ಲ. ಅವರ ಈ ವಿಶೇಷ ಗುಣದಿಂದ ಆಕರ್ಷಿತರಾದ ಭಕ್ತರಂತೂ ಸರಿಯೆ, ವಿದ್ವಾಂಸರು, ಸಾಹಿತಿಗಳು, ಸಂಗೀತಕಾರರು ಮೃತ್ಯುಂಜಯ ಅಪ್ಪಗಳ ದರುಶನಕ್ಕೆ ಬರುತ್ತಲೇ ಇದ್ದರು. ಪ್ರಸಾದ, ಶಿವಾನುಭವ, ದಾಸೋಹ, ಕಾಯಕ ಮೊದಲಾದ ಪದಗಳಿಗೆ ಈ ಮಠದ ವಾತಾವರಣವೇ ಅರ್ಥಬೋಧೆ ಮಾಡುವಂತಿತ್ತು. ಸ್ವಾಮಿಗಳು ಅತ್ಯಂತ ಆದರದಿಂದ ಬರಮಾಡಿ ಕೊಂಡು ಭಕ್ತಿಸೇವೆ ಸಲ್ಲಿಸುತ್ತಿದ್ದ ಮಠಾಧಿಪತಿಗಳಲ್ಲಿ ತುಮಕೂರಿನ ಶಿವಕುಮಾರಸ್ವಾಮಿಗಳೂ ಒಬ್ಬರಾಗಿದ್ದರು. ಸುಮಾರು ಅರವತ್ತೆಂಟು ವರ್ಷಗಳ ಹಿಂದೆ ಧಾರವಾಡದ ಮುರುಘಾಮಠದಲ್ಲಿ ಅವರನ್ನು ಮೊದಲ ಸಲ ಕಂಡ ಆ ಎತ್ತರದ ನಿಲವು ನನ್ನ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿದಿದೆ.

ಆ ಮೇಲೆ ನಾನು ಅವರನ್ನು ಕಂಡದ್ದು ೧೯೬೩ರಲ್ಲಿ ಸಿದ್ಧಗಂಗಾ ಕ್ಷೇತ್ರದಲ್ಲಿ ನೆರವೇರಿದ ೪೪ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ. ಸಮ್ಮೇಳನದ ಕವಿ ಗೋಷ್ಠಿಯಲ್ಲಿ ಭಾಗವಹಿಸಲು ನನ್ನನ್ನು ಆಮಂತ್ರಿಸಲಾಗಿತ್ತು. ಕವಿಮಿತ್ರರಾದ ಡಾ. ಜಿ.ಎಸ್. ಶಿವರುದ್ರಪ್ಪನವರು ಆ ಗೋಷ್ಠಿಯ ಅಧ್ಯಕ್ಷರು. ನಾವಿಬ್ಬರೂ ಅಲ್ಲಿಯ ಹಾಸ್ಟೆಲಿನ ಒಂದು ಕೋಣೆಯಲ್ಲಿ ಉಳಿದುಕೊಂಡಿದ್ದೆವು. ರಾತ್ರಿ ಮೂರು ಗಂಟೆಯ ಹೊತ್ತಿಗೆ ಟಕ್, ಟಕ್ ಎಂಬ ಲಯಬದ್ಧ ಸದ್ದು ಕೇಳಿ ನನಗೆ ಎಚ್ಚರವಾಯಿತು. ನಾನು ಶಿವರುದ್ರಪ್ಪನವರನ್ನು ವಿಚಾರಿಸಿದಾಗ ಅದು ಸ್ವಾಮಿಗಳು ನಡೆದಾಡುವಾಗಿನ ಆವುಗೆಯ ಸಪ್ಪಳ ಎಂದು ಗೊತ್ತಾಯಿತು. ೧೯೪೩–೪೪ರಲ್ಲಿ ತುಮಕೂರು ಇಂಟರ್‌ಮೀಡಿಯೇಟ್ ಕಾಲೇಜಿನಲ್ಲಿ ಓದುವಾಗ ಸಿದ್ಧಗಂಗಾಮಠ ತಮಗೆ ಆಶ್ರಯ ನೀಡಿದ್ದನ್ನೂ ಸ್ವಾಮಿಗಳ ಬಗೆಗಿನ ಭಾವನಾತ್ಮಕ ಸಂಬಂಧವನ್ನೂ ಕೃತಜ್ಞತೆಯಿಂದ ಅವರು ನೆನೆದುಕೊಂಡರು. **'ಸಿದ್ಧಗಂಗೆಯ ಶ್ರೀಚರಣಕ್ಕೆ'** ಅವರ ಕವಿತೆಯಲ್ಲಿ ಒಂದು ಸುಂದರ ಸ್ಮೃತಿಯಾಗಿ ಅದು ಒಡಮೂಡಿದೆ:

*ಹರನ ಕರುಣೋದಯದ ತೆರದಲಿ ಬೆಳಗು ತೆರೆಯುವ ಹೊತ್ತಿಗೆ*
*ವೇದಘೋಷದ ದಿವ್ಯಲಹರಿಯ ಮನವ ತೊಳೆಯಲು ಮೆಲ್ಲಗೆ*
*ಬರುವ ಶ್ರೀಗುರು ಪಾದುಕೆಯ ದನಿ ಅನುರಣಿತವಾಗಲು ಮೌನಕೆ*
*ಸಿದ್ಧಗಂಗೆಯ ನೆಲವು-ಜಲವೂ ನಮಿಸಿ ನಿಲುವುದು ಸುಮ್ಮಗೆ.*

ಅಂದಿನ ಸಾಹಿತ್ಯ ಸಮ್ಮೇಳನದ ಸ್ವಾಗತಾಧ್ಯಕ್ಷರಾಗಿ ಅದರ ಎಲ್ಲಾ ಏರ್ಪಾಡುಗಳನ್ನೂ ಸಮರ್ಥವಾಗಿ ನಿರ್ವಹಿಸಿದ ಶ್ರೀಗಳವರು ಸಮ್ಮೇಳನದ ಎಲ್ಲ ಗೋಷ್ಠಿಗಳಿಗೂ ನಿಯಮಿತ ವೇಳೆಗೆ ಮುಂಚಿತವಾಗಿಯೇ ವೇದಿಕೆಯ ಮೇಲೆ ಆಸೀನರಾಗಿರುತ್ತಿದ್ದರು. ಅಂಥ ಸಮಯ ನಿಷ್ಠೆ ಇದುವರೆಗೆ ನಾನು ಭಾಗವಹಿಸಿದ ಯಾವ ಸಾಹಿತ್ಯ ಸಮ್ಮೇಳನದಲ್ಲಿಯೂ ಕಂಡು ಬಂದಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗದು.

ಸಮ್ಮೇಳನದ ಅಧ್ಯಕ್ಷರಾಗಿದ್ದ ಡಾ. ರಂ.ಶ್ರೀ ಮುಗಳಿಯವರು ತಮ್ಮ ಭಾಷಣದ ಪ್ರಾರಂಭದಲ್ಲಿಯೇ ಹೀಗೆ ಪ್ರಸ್ತಾಪಿಸಿದರು.

'ತುಮಕೂರು ಜಿಲ್ಲೆ ಮತ್ತು ಶ್ರೀ ಸಿದ್ಧಗಂಗಾ ಕ್ಷೇತ್ರವು ಶ್ರೀ ಸಿದ್ಧಲಿಂಗೇಶ್ವರ, ನಿಟ್ಟೂರು ನಂಜಣ್ಣ, ವಿರಕ್ತ ತೋಂಟದಾರ್ಯ, ಗುಬ್ಬಿ ಮಲ್ಲಣ್ಣಾರ್ಯ ಮತ್ತು ಮಲ್ಲಣಾಚಾರ್ಯ, ಕವಿ ಶಾಂತೇಶ, ಗೂಳೂರು ಸಿದ್ಧವೀರಣಾಚಾರ್ಯ, ಸಂಪಾದನೆಯ ಪರ್ವತೇಶ್ವರ ಮುಂತಾದ ಹಲವಾರು ಮನ್ನಣೆವೆತ್ತ ಪಂಡಿತ ಕವಿಗಳ ಮತ್ತು ಶರಣರ ಪಾದಸ್ಪರ್ಶದಿಂದ ಪುನೀತವಾಗಿದೆ; ಅವರ ಕೃತಿಗಳಿಂದ ಪ್ರಖ್ಯಾತ ವಾಗಿದೆ. ಇಂಥ ಜಿಲ್ಲೆಯ ಈ ಪುಣ್ಯಕ್ಷೇತ್ರದಲ್ಲಿ ವಿದ್ಯಾಪ್ರೇಮಿಗಳೂ, ವಿದ್ಯಾದಾನಿಗಳೂ ಆದ ಪೂಜ್ಯ ಶ್ರೀ.ನಿ.ಪ್ರ. ಶಿವಕುಮಾರಸ್ವಾಮಿಗಳ ಸಮರ್ಥ ನೇತೃತ್ವ ದಲ್ಲಿ ಇದೇ ಜಿಲ್ಲೆಯವರೂ ಕನ್ನಡ ಸಾಹಿತ್ಯ

ಪರಿಷತ್ತಿನ ಅಧ್ಯಕ್ಷರೂ ಆಗಿರುವ ಮಾನ್ಯ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ಚತುರ ಬೆಂಬಲದಿಂದ ಸ್ವಾಗತಿ ಸಮಿತಿಯು ಸಾಹಿತ್ಯ ಸಮ್ಮೇಳನವನ್ನು ನೆರವೇರಿಸುವುದು ತುಂಬ ಅಭಿನಂದನೀಯ ಸಂಗತಿಯಾಗಿದೆ. ಸುಮಾರು ಐವತ್ತು ವರ್ಷಗಳಲ್ಲಿ ಇದುವರೆಗೆ ಕನ್ನಡ ಸಾಹಿತ್ಯ ಸಮ್ಮೇಳನವು ಈ ತುಮಕೂರು ಜಿಲ್ಲೆಯಲ್ಲಿ ಆಗಲಿಲ್ಲವೆಂಬ ಅಪವಾದವನ್ನು ಈ ಸಮ್ಮೇಳನ ಪರಿಹರಿಸಿದೆ ಎನ್ನಬಹುದು'.

೨೦೦೨ರಲ್ಲಿ ೬೯ನೇ ಕನ್ನಡ ಸಾಹಿತ್ಯ ಸಮ್ಮೇಳನ ತುಮಕೂರಿನಲ್ಲಿ ನೆರವೇರಿದ ಸಂದರ್ಭದಲ್ಲಿ ಪ್ರತಿನಿಧಿಗಳಿಗೆ ಊಟದ ವ್ಯವಸ್ಥೆ ಸರಿಯಾಗಿರದಿದ್ದರಿಂದ ಬಹಳ ಗೊಂದಲವುಂಟಾಗಿ ಮರುದಿನ ಪತ್ರಿಕೆಗಳಲ್ಲಿಯೂ ಟೀಕೆಗಳು ಪ್ರಕಟವಾದವು. ಈ ವಿಷಯವನ್ನು ತಿಳಿದು ಸ್ವಾಮಿಗಳು ತುಂಬ ನೊಂದುಕೊಂಡು ತಮ್ಮ ಮಠದ ದಾಸೋಹದಲ್ಲಿ ಅಂಥಹವರಿಗೆ ಪ್ರಸಾದ ವ್ಯವಸ್ಥೆ ಮಾಡಿದ್ದನ್ನು ನಾನು ಕಣ್ಣಾರೆ ಕಂಡಿದ್ದೇನೆ.

ತ್ರಿವಿಧ ದಾಸೋಹ ಪದವನ್ನು ಕೇವಲ ಧಾರ್ಮಿಕ ಅರ್ಥದಲ್ಲದೆ ಸಾಮಾಜಿಕ ಶೈಕ್ಷಣಿಕ ಸೇವೆ ಎಂಬರ್ಥದಲ್ಲಿಯೂ ಶ್ರೀಗಳು ಸ್ವೀಕರಿಸಿದರು. ೧೯೪೧ರಿಂದ ಸಿದ್ಧಗಂಗಾ ಮಠದ ಅಧ್ಯಕ್ಷರಾಗಿ ಸೇವಾಜೀವನವನ್ನು ಮುಂದುವರಿಸಿಕೊಂಡು ಬಂದ ಕಾಲು ಶತಮಾನದಲ್ಲಿ ಅನೇಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ಅನ್ನದಾಸೋಹ, ಜ್ಞಾನ ದಾಸೋಹಗಳೆರಡನ್ನೂ ಯಶಸ್ವಿಯಾಗಿ ಕೈಕೊಂಡು, ಜಾತಿಮತಗಳ ಭೇದವಿಲ್ಲದೆ ಸಾವಿರಾರು ವಿದ್ಯಾರ್ಥಿಗಳಿಗೆ ಉಚಿತ ಊಟ ವಸತಿಯ ಏರ್ಪಾಟು ಮಾಡಿ ಅವರಲ್ಲಿ ಶಿಸ್ತು, ಸಂಯಮ, ಸಮತಾಭಾವವನ್ನು ಮೂಡಿಸತೊಡಗಿದರು. ಶ್ರೀಗಳವರ ಈ ಸದ್ದಿಲ್ಲದ ಸಾಧನೆ ಸಂಯುಕ್ತ ಮುಂಬಯಿ ರಾಜ್ಯದ ಸಾರ್ವಜನಿಕ ಶಿಕ್ಷಣ ಇಲಾಖೆಯ ನಿವೃತ್ತ ನಿರ್ದೇಶಕರೂ, ಶ್ರೇಷ್ಠ ಶಿಕ್ಷಣತಜ್ಞರೂ ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳೂ ಆದ ಡಾ. ಡಿ.ಸಿ. ಪಾವಟೆಯವರ ಲಕ್ಷ್ಯವನ್ನು ಸೆಳೆಯಿತು.

೧೯೬೫ರಲ್ಲಿ ವಿಶ್ವವಿದ್ಯಾಲಯ ವಾರ್ಷಿಕ ಘಟಿಕೋತ್ಸವದ ಸಂದರ್ಭದಲ್ಲಿ ಶ್ರೀ ಶಿವಕುಮಾರಸ್ವಾಮಿಗಳವರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ನೀಡಿ ಆದರ ಪೂರ್ವಕ ಗೌರವಿಸಲಾಯಿತು. ಪರಂಪರೆಯ ಜೊತೆಗೆ ಆಧುನಿಕ ಕಾಲದ ಪ್ರಗತಿಪರ ವಿಚಾರಗಳಿಗೂ ಪ್ರಜಾ ತಾಂತ್ರಿಕ ಮೌಲ್ಯಗಳಿಗೂ ಸ್ಪಂದಿಸುತ್ತಿರುವ ಶ್ರೀಗಳವರ ಕಾರ್ಯ ಎಷ್ಟೊಂದು ಅದ್ಭುತವಾದದ್ದು ಎಂಬುದು ಇದರಿಂದ ಶಿಕ್ಷಣ ಪ್ರೇಮಿಗಳಿಗೆ ಮನವರಿಕೆಯಾಯಿತು.

*(ಕೃಪೆ : ಸಂಯುಕ್ತ ಕರ್ನಾಟಕ)*

## ಶ್ರೀವಾಣಿ

*ನಗರ, ಗ್ರಾಮ, ನಾಡು, ಕಾಡು ಯಾವುದೇ ಇರಲಿ ಪರಮಾತ್ಮ ಒಂದು ಅಪೂರ್ವ ವಸ್ತು ಕೊಟ್ಟಿದ್ದಾನೆ. ಅದೇ ಮಾನವ ಜನ್ಮ. ಅದು ಅಮೂಲ್ಯವಾಗಿದೆ. ಅನಂತವಾಗಿದೆ. ಸೃಷ್ಟಿಯಲ್ಲಿ ಜೀವಜಂತುಗಳು ಅಸಂಖ್ಯವಾಗಿವೆ. ವೈವಿಧ್ಯಮಯವೆನಿಸಿವೆ. ಅವು ಜನ್ಮತಾಳಿದಂದಿನಿಂದ ಇಂದಿನ ಕಂಪ್ಯೂಟರ್ ಯುಗದವರೆಗೂ ತಮ್ಮಲ್ಲಿ ಯಾವುದೇ ಬದಲಾವಣೆ ಕಂಡಿಲ್ಲ. ಅಷ್ಟಿಷ್ಟು ದೈಹಿಕ ಬದಲಾವಣೆ ನಡೆದಿರಬಹುದು. ಅದೇ ಜೀವವಿಜ್ಞಾನಿಗಳಿಗೆ ಅಧ್ಯಯನದ ವಿಷಯವೂ ಆಗಿರುವುದು ನಿಜ. ಆದರೆ ಅವುಗಳ ಮೂಲಭೂತ ಮನೋಧರ್ಮದಲ್ಲಿ ವ್ಯತ್ಯಾಸ ವ್ಯಕ್ತವಾಗಿರುವುದಿಲ್ಲ. ಮನುಷ್ಯ ಹಾಗಲ್ಲ. ಕಾಲಕಾಲಕ್ಕೆ ಬದಲಾಗುತ್ತ ನಡೆದಿದ್ದಾನೆ. ಆದಿಮಾನವಸ್ತರದಿಂದ ಕಂಪ್ಯೂಟರ್ ತಯಾರಿಕೆಯ ವರೆಗೆ ಅವನ ವಿಚಾರಶಕ್ತಿ ವಿಕಾಸವಾಗಿದೆ. ತನ್ನ ಸುಖ ಭೋಗ ಜೀವನಕ್ಕೆ ಬೇಕಾಗುವ ಎಲ್ಲ ಸೌಲಭ್ಯಗಳನ್ನೂ ಉತ್ಪತ್ತಿಮಾಡಿಕೊಳ್ಳುತ್ತಿದ್ದಾನೆ. ಮನುಷ್ಯ ನಿತ್ಯ ಪರಿವರ್ತನ ಶೀಲ. ತನ್ನ ಜೀವನ ವಿಧಾನದಲ್ಲಿ ತುಂಬ ಬದಲಾಗುತ್ತಿದ್ದಾನೆ. ಆದರೆ ಬದಲಾಗಬೇಕಾದ ರೀತಿಯಲ್ಲಿ ಬದಲಾಗುತ್ತಿಲ್ಲ. ಸ್ವಾರ್ಥದ ಕಿರೀಟಧರಿಸುವುದರಲ್ಲೇ ಭಗೀರಥ ಪ್ರಯತ್ನ ಸಾಗಿಸಿದ್ದಾನೆ. ಮಹಾನುಭಾವರ ಜೀವನದೃಷ್ಟಿಯತ್ತ ಕಣ್ಣು ಹಾಯಿಸುತ್ತಿಲ್ಲ. ದೊಡ್ಡವರು ತಮ್ಮ ಸ್ವರೂಪದ ಬಗ್ಗೆ ತುಂಬ ಚಿಂತನೆ ಮಾಡಿದ್ದಾರೆ. ಮನುಷ್ಯನೆಂದರೆ ಬರೀ ದೇಹವಲ್ಲ. ಆತ್ಮ ಮತ್ತು ದೇಹಗಳು ಒಂದುಗೂಡಿದ ಘಟಕ. ಅದು ರತ್ನಪ್ರಾಯವಾದುದು. ಆ ಘಟಕದಲ್ಲಿ ಜ್ಞಾನರತ್ನ ಸ್ವಯಂ ಪ್ರಕಾಶವಾಗುವ ಸಾಧನೆ ಮಾಡಬೇಕೆಂದಿದ್ದಾರೆ. ಅದಕ್ಕಾಗಿ ನೀತಿ ಸಂಹಿತೆ, ಆಚಾರ ಸಂಹಿತೆ, ತತ್ವಸಂಹಿತೆ ಹಾಗೂ ಧರ್ಮಸಂಹಿತೆಗಳನ್ನು ರೂಪಿಸಿಕೊಟ್ಟಿದ್ದಾರೆ. ಸಾವಿರಾರು ವರ್ಷಗಳಿಂದ ಅನಂತದ ಕಡೆಗೆ ಮುಖಮಾಡಿ ಹೆಜ್ಜೆಯಿಡುತ್ತ ನಡೆದಿರುವ ಆತ್ಮಕ್ಕೆ ಈ ಜೀವನ ಸಂಹಿತೆ ದಾರಿದೀಪವಾಗಿದೆ. ಇಂಥ ಆತ್ಮವನ್ನು ''ನೈನಂ ಛಿದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ'' ಅವಿನಾಶಿಯಾದ ಆತ್ಮ ದೇಹ ಬದಲಾಯಿಸಬಹುದು, ತಾನು ಸಾಯುವುದಿಲ್ಲ. ಅದು ಅಮೃತರೂಪಿ. ಕಾಣಿಸದು ಹೊರಗಣ್ಣಿಗೆ. ಅನುಭವಕ್ಕೆ ವೇದ್ಯ, ಆನಂದವೇ ಅದರ ಗುರಿ.*







# ಆಧ್ಯಾತ್ಮ ಸೂರ್ಯ

– ಡಾ. ಜಿ.ಎಸ್. ಶಿವರುದ್ರಪ್ಪ
೮೭೭, ಚೈತ್ರ, ೧೪ನೇ ಮುಖ್ಯರಸ್ತೆ, ಬನಶಂಕರಿ ೨ನೇ ಹಂತ,
ಬೆಂಗಳೂರು – ೫೬೦ ೦೭೦.

**ಬೆಂ**ಗಳೂರು ತುಮಕೂರುಗಳ ನಡುವೆ ಸದಾ ಸಾವಿರ ಗಾಲಿಗಳು ಉರುಳುವ ಹೆದ್ದಾರಿಯಲ್ಲಿ ಕ್ಯಾತ್ಸಂದ್ರದ ಬಳಿ ಬಲಕ್ಕೆ ಹೊರಳಿದರೆ ಅನತಿ ದೂರದಲ್ಲಿಯೇ ನಾವು ಋಷ್ಯಾಶ್ರಮ ಸದೃಶವಾದ ತಪೋವನವೊಂದನ್ನು ಪ್ರವೇಶಿಸಿದ ಅನುಭವಕ್ಕೆ ಒಳಗಾಗುತ್ತೇವೆ. ಅತ್ತ ಇತ್ತ ಎತ್ತರವಾದ ಮರಗಳು; ಅದರಾಚೆ ಹರಡಿಕೊಂಡ ಹೊಲಗಳು; ಮುಂದೆ ಕಾಣುವ ವಿದ್ಯಾರ್ಥಿ ವಸತಿಗಳ ಸಮುಚ್ಚಯ ಹಾಗೂ ಪಾಠಶಾಲೆಗಳು; ಭಕ್ತಿ ಜನಾಕರ್ಷಕವಾದ ಗದ್ದುಗೆಗಳು, ದೇವಾಲಯಗಳು; ಮಠಗಳು; ದಾಸೋಹ ಮತ್ತು ಪ್ರಸಾದ ನಿಲಯಗಳು; ಅತಿಥಿ ಗೃಹಗಳು; ಮುಂದೆ ಎಂದಿನಿಂದಲೋ ತಪಸ್ಸಿಗೆ ಕೂತಂತಿರುವ ಗುಡ್ಡ; ಆ ಗುಡ್ಡದ ಮೆಟ್ಟಿಲ ಸಾಲುಗಳನ್ನೇರಿ ಹೋದರೆ ಅದು ತಲುಪುವ ಸಿದ್ಧಲಿಂಗೇಶ್ವರ ದೇವಾಲಯದ ತಂಪು; ಅದರ ಎದುರಿನ ಗುಹೆಯೊಳಗೆ ಹಾಗೂ ಎಂದೂ ಅರಕೆಯಾಗದ 'ಸಿದ್ಧಗಂಗೆ'ಯ 'ತೀರ್ಥಜಲ' ಕುಂಡ; ಈ ದೇಗುಲದ ಪ್ರಾಕಾರದಿಂದ ಹೊರಬಂದು ಮೇಲೇರಿ ನಿಂತರೆ, ಒಂದೊಂದು ದಿಕ್ಕಿಗೆ ಒಂದೊಂದು ಆಕಾರದಲ್ಲಿ ದೃಗ್ಗೋಚರವಾಗುವ ಶಿವಗಂಗೆ ಬೆಟ್ಟ ಧೀರ ನಿಲುವು; ಎಡಕ್ಕೆ ಎತ್ತರವಾದ ರಾಮದೇವರ ಬೆಟ್ಟ; ಹಿಂದಕ್ಕೆ ಏರಿಳಿದ ಶಿಖರ ಕಾನನ–ಕಂದರಗಳ ದೇವರಾಯನದುರ್ಗ ಮತ್ತು ನಾವು ನಿಂತ ನೆಲೆಯಲ್ಲೆ ಎತ್ತರವಾದ ಧ್ವಜಸ್ತಂಭವೊಂದರ ಮೇಲೆ ಸದಾ ಸಭಿಕರನ್ನು ಕೈಬೀಸಿ ಕರೆಯುವ ಕಾವಿಯ ಬಾವುಟ.

ಇಂಥ ತಪೋವನ ಸದೃಶವಾದ 'ಸಿದ್ಧಗಂಗೆ'ಯ ಈ ಪರಿಸರದಲ್ಲಿ ಅರ್ಧ ಶತಮಾನಕ್ಕೂ ಹಿಂದೆ, ಮೂರು ವರ್ಷಗಳ ಕಾಲ ನಾನೊಬ್ಬ ವಿದ್ಯಾರ್ಥಿಯಾಗಿ ಕಳೆದ ಕಾಲವನ್ನು ನೆನೆದುಕೊಂಡರೆ ಧನ್ಯತೆ ಹಾಗೂ ಕೃತಜ್ಞತೆಯ ಭಾವನೆಗಳಲ್ಲದೆ ಮತ್ತೇನೂ ಕಾಣವು. ಬಡತನ ಹಾಗೂ ಅನಕ್ಷರತೆಗಳ ಪ್ರಧಾನವಾದ ಅವಕಾಶ ಹೀನರಲ್ಲಿ ಒಬ್ಬನಾಗಿದ್ದ ನಾನು ನನ್ನಂಥ ಎಷ್ಟೋ ಜನ, ಈ ಹೊತ್ತು ತಲೆಯೆತ್ತಿಕೊಂಡು ದಿಟ್ಟತನದಿಂದ ಬದುಕಲು ಸಾಧ್ಯವಾಗಿರುವುದು, ಅಂದು ನನಗೆ ಈ ಶ್ರೀಕ್ಷೇತ್ರ ಒದಗಿಸಿದ ಅಶನ–ವಸತಿಗಳ ಆಶ್ರಯದಿಂದಲೇ. ಅಂದು ಇಂದಿನ ಹಾಗೆ, ಒಂದೊಂದು ಜಾತಿ–ಮತಗಳಿಗೊಬ್ಬೊಬ್ಬ 'ಜಗದ್ಗುರು'ಗಳಿರಲಿಲ್ಲ. ಇಂದಿನ ಹಾಗೆ ಬಹುಸಂಖ್ಯೆ ಶಿಕ್ಷಣದ ವ್ಯಾಪಾರ ಸಂಸ್ಥೆಗಳೂ ಇರಲಿಲ್ಲ. ಬಹುತೇಕ ಸಾಮರಸ್ಯದಿಂದ ಬದುಕುತ್ತಿದ್ದ ಸಾಮಾಜಿಕ ಸಂದರ್ಭಗಳಿಂದಾಗಿ, '**ಜಾತ್ಯತೀತತೆ**'ಯ ಘೋಷಣೆಗಳಾಗಲೀ, ಭಾವೈಕ್ಯದ ಮಂತ್ರ ಪಠನಗಳಾಗಲೀ ಇರಲಿಲ್ಲ. ಸನಾತನ ಧರ್ಮವನ್ನು ಸಂರಕ್ಷಿಸಿಕೊಂಡು ಬರುವುದರಲ್ಲೇ ಬಹುಮಟ್ಟಿಗೆ ತೃಪ್ತವಾದ ಮೇಲ್ ವರ್ಗದ ಮಠಗಳನ್ನು ಹೊರತುಪಡಿಸಿದರೆ, ನಿಜವಾಗಿಯೂ ಸಾಮಾಜಿಕ ಕಾಳಜಿಗಳಿಂದ ತುಡಿಯುತ್ತ ಬಹುಜನ ಹಿತವನ್ನು ಗುರಿಯಾಗಿರಿಸಿಕೊಂಡ ಕೆಲವು ಮಠಗಳಿದ್ದದ್ದು–ಶರಣ ಧರ್ಮದವರಲ್ಲೇ. ಅವುಗಳೆಲ್ಲಲ್ಲ ಸಿದ್ಧಗಂಗೆಯ ಮಠ ಮಾರ್ಗದರ್ಶಕ ಸ್ಥಾನದಲ್ಲಿತ್ತು ಎಂದರೆ ಉತ್ಪ್ರೇಕ್ಷೆಯೇನಲ್ಲ.

ಬಹು ಹಿಂದಿನ ಕಾಲದಿಂದಲೇ ಅನೇಕ ಸಾಧು ಸಂತರ ತಪೋವನವಾಗಿದ್ದ ಸಿದ್ಧಗಂಗೆಯ ಈ ಪರಿಸರಕ್ಕೆ ಅನೇಕ ಪೌರಾಣಿಕವಾದ ಹಾಗೂ ಚಾರಿತ್ರಿಕವಾದ ನೆನಪುಗಳಿವೆ. ಹದಿನೈದನೆಯ ಶತಮಾನದ ಎಡೆಯೂರಿನಲ್ಲಿ, ಹಿಂದಿನ ಬನವಾಸಿ ಶರಣರ ಬದುಕನ್ನೂ ಬರಹಗಳನ್ನೂ ನೆನಪಿಗೆ ತರುವಂಥ ಉತ್ಕ್ರಾಂತಿಯೊಂದಕ್ಕೆ ಕಾರಣರಾದ ಮತ್ತು ನೂರಾ ಒಂದು ವಿರಕ್ತರ ಸಮುದಾಯದ ಕೇಂದ್ರ ವ್ಯಕ್ತಿಯಾಗಿ, ಶರಣ ಧರ್ಮದ ಪ್ರಸಾರ ಕಾರ್ಯದಲ್ಲಿ ತೊಡಗಿಸಿಕೊಂಡ ತೋಂಟದ ಸಿದ್ಧಲಿಂಗ ಯತಿಗಳು, ಈ ಪ್ರದೇಶದಲ್ಲಿ ಸಂಚರಿಸಿ ಕೆಲವು ಕಾಲ ಇದನ್ನು ತಮ್ಮ ತಪೋಭೂಮಿಯನ್ನಾಗಿ ಮಾಡಿಕೊಂಡಿದ್ದಾರೆಂದು ಹೇಳಲಾಗಿದೆ. ಆದರೆ ಈ '**ತಪೋಭೂಮಿ**'ಯಲ್ಲಿ ನಿಜವಾದ ಒಂದು ಪರಿವರ್ತನೆಯಾದದ್ದು ಹತ್ತೊಂಭತ್ತನೇ ಶತಮಾನದ ಶ್ರೀ ಅಟವೀಸ್ವಾಮಿಗಳ ಹಾಗೂ ಅವರ ಉತ್ತರಾಧಿಕಾರಿಗಳಾದ ಶ್ರೀ ಉದ್ದಾನ ಸ್ವಾಮಿಗಳ ಕಾಲದಲ್ಲಿಯೇ, ಹೆಸರೇ ಸೂಚಿಸುವಂತೆ ಶ್ರೀ ಉದ್ದಾನ ಸ್ವಾಮಿಗಳ ಕಾಲದಲ್ಲಿಯೇ, ಹೆಸರೇ ಸೂಚಿಸುವಂತೆ ಕೇವಲ ಅರಣ್ಯ ವಾಸಿಗಳಾದ ಶ್ರೀ ಅಟವೀಸ್ವಾಮಿಗಳು, ಈ ಕ್ಷೇತ್ರಕ್ಕೆ ಬಂದು ಹೋಗುವ ಭಕ್ತಾದಿಗಳಿಗೆ 'ಅನ್ನದಾಸೋಹ'ದ



ವ್ಯವಸ್ಥೆಯನ್ನು ಪ್ರಾರಂಭ ಮಾಡಿದರು. ಅಂದು ಯಾವ ಒಂದು ಸುಮೂಹರ್ತದಲ್ಲಿ ಅವರು ಹೊತ್ತಿಸಿದರೋ ಆ ಅಡುಗೆ ಒಲೆಯ ಬೆಂಕಿ ಈ ಹೊತ್ತಿಗೂ ಆರಿಲ್ಲ. ನಾನು ಕಂಡಂತೆ ಹಗಲು ಇರುಳೂ ಇಂದಿಗೂ ಅಡುಗೆ ಮನೆಯ ಒಲೆಯಲ್ಲಿ ದೊಡ್ಡ ದೊಡ್ಡ ಕೊರಡುಗಳು ಉರಿಯುತ್ತಲೇ ಇರುತ್ತವೆ. ಭಾರೀ ಗಾತ್ರದ ಕಡಾಯಿಗಳಲ್ಲಿ ಅನ್ನ ಬೇಯುತ್ತಲೇ ಇರುತ್ತದೆ; ಮುದ್ದೆಯ ಎಸರು ಕುದಿಯುತ್ತಲೇ ಇರುತ್ತದೆ; ದೊಡ್ಡ ಹಾಸುಗಲ್ಲಿನ ಮೇಲೆ ರಾಶಿ ರಾಶಿ ಪೇರಿಸಿದ ರಾಗಿ ಮುದ್ದೆಯ ಕಿರಿ ಪರ್ವತಗಳು ರಾರಾಜಿಸುತ್ತಲೇ ಇರುತ್ತವೆ. ಪಂಕ್ತಿಯ ನಂತರ ಪಂಕ್ತಿಯಲ್ಲಿ ಇಲ್ಲಿನ ವಿದ್ಯಾರ್ಥಿಗಳೂ, ದಿನವೂ ಬಂದು ಹೋಗುವ ಬಹುಸಂಖ್ಯೆ ಭಕ್ತಾದಿಗಳೂ– ಕೂತು ಊಟ ಮಾಡುತ್ತಾರೆ. ವಿವಿಧ ಕಾರ್ಯಾಂತರಗಳಿಗಾಗಿ ಬಂದು ಸ್ವಾಮಿಗಳ ದರ್ಶನ ಪಡೆದವರಿಗೆ ಇಂದಿನ ಸ್ವಾಮಿಗಳು ಹೇಳುವ ಮೊದಲ ಮಾತೆಂದರೆ; **'ಊಟ ಮಾಡಿಕೊಂಡು ಹೋಗಿ'** ಅನ್ನುವುದು. ನಾನು ನಲವತ್ತರ ದಶಕದ ಕಾಲದಲ್ಲಿ ಈ ಮಠದಲ್ಲಿದ್ದಾಗ, ದಿನವೂ ರಾತ್ರಿ ಹತ್ತುಗಂಟೆಯ ನಂತರ ಕೇಳಿ ಬರುತ್ತಿದ್ದ ಒಂದು ಘೋಷಣೆ ಅಂದರೆ ***'ಊಟ ಮಾಡೋರು ಯಾರಾದರೂ ಇದ್ದರೆ ಬರ್‍ರಪ್ಪ'*** – ಅನ್ನುವುದು.

ನಾನು ಅನೇಕ ವೇಳೆ ಆಶ್ಚರ್ಯಪಟ್ಟಿದ್ದೇನೆ. ಇದೇನಿದು ಹಗಲೂ–ರಾತ್ರಿಯೂ ಬಂದು ಹೋಗುವ ಇಷ್ಟೊಂದು ಜನಕ್ಕೂ ಹೀಗೆ ಊಟದ ವ್ಯವಸ್ಥೆ ಮಾಡಲು ಈ ಮಠವೊಂದು ಪುರಾಣ ಕಾಲದ ಅಕ್ಷಯಪಾತ್ರೆಯೇ – ಎಂದು. ಆದರೆ ಈ ಮಠದ ಅಕ್ಷಯಪಾತ್ರೆ ಸಾರ್ವಜನಿಕರೇ ಅನ್ನುವುದು ಸೋಜಿಗದ ಸಂಗತಿಯೇನಲ್ಲ. ಈ ದಾಸೋಹವನ್ನು ಪ್ರಾರಂಭಿಸಿದ ಮೊದಲಲ್ಲಿ, ಶ್ರೀ ಅಟವೀ ಸ್ವಾಮಿಗಳೂ, ಶ್ರೀ ಉದ್ದಾನ ಸ್ವಾಮಿಗಳೂ ಜೋಳಿಗೆ ಹಿಡಿದು ಸುತ್ತಮುತ್ತಣ ಹಳ್ಳಿಗಳಿಂದ ಭಿಕ್ಷಾರೂಪದ ದವಸ ಧಾನ್ಯಗಳನ್ನು ಸಂಗ್ರಹಿಸಿ ತರುತ್ತಿದ್ದನ್ನೂ ಗಮನಿಸಿದ್ದೆ. ಈಗಿನ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳೂ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿದಾಗ ಮೊದಲು ಮಾಡಿದ ಕೆಲಸವೇ ಇದು. ಸರ್ವಜ್ಞ ಹೇಳಿದಂತೆ **'ತಿರಿವರಿಂ ಸಿರಿವಂತರಾರು?'** ಇದರ ಪರಿಣಾಮವಾಗಿ, ಇಲ್ಲಿ ನಡೆಯುವ ನಿತ್ಯ ದಾಸೋಹ ಹಾಗೂ ಶಿಕ್ಷಣ ಕಾರ್ಯಗಳನ್ನು ಕಂಡು, ಜನ ತಾವಾಗಿಯೇ ತಮ್ಮ ಕಾಣಿಕೆ ಎಂದೋ ಕೊಡುಗೆ ಎಂದೋ ಗಾಡಿಗಾಡಿಗಳಲ್ಲಿ ದವಸ ಧಾನ್ಯಗಳನ್ನು ತಂದು ಮಠದ ಉಗ್ರಾಣಕ್ಕೆ ಅರ್ಪಿಸುವುದನ್ನು ನಾನೇ ನೋಡಿದ್ದೇನೆ. ಹೀಗೆ ಜನರ ನಂಬಿಕೆಯನ್ನು ಶ್ರದ್ಧೆಯನ್ನು, ಈ ಮಠದ ಸಾಮಾಜಿಕ ಜವಾಬ್ದಾರಿಯೊಳಗೆ ತಮ್ಮ ಪಾತ್ರವೂ ಕೂಡಿಕೊಂಡಿದೆ ಎಂಬ ವಿಶ್ವಾಸವನ್ನು ಉಳಿಸಿರುವುದು ಹಾಗೂ ಬೆಳೆಯಿಸಿರುವುದು, ಈ ಮಠದ ಕೇಂದ್ರ ಮೂರ್ತಿಯಾದ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳ ವ್ಯಕ್ತಿತ್ವವೇ ಅನ್ನುವುದು ಬಹುಮುಖ್ಯವಾದ ಸಂಗತಿಯಾಗಿದೆ.

ಮೊದಲ ಅಗತ್ಯ ಅನ್ನ, ನಿಜ; ಆದರೆ ಹೊಟ್ಟೆಯ ಹಸಿವಿನ ಜತೆಗೆ ಮನಸ್ಸಿನ ಹಸಿವೂ ಇದೆಯಲ್ಲ. ಅದಕ್ಕೆ ಆಹಾರ ಎಂದರೆ ಶಿಕ್ಷಣವೇ. ಈ ಕಾರ್ಯವೂ ಪ್ರಾರಂಭವಾದದ್ದು ಶ್ರೀ ಅಟವೀ ಸ್ವಾಮಿಗಳ ಶಿಷ್ಯರಾದ ಶ್ರೀ ಉದ್ದಾನ ಸ್ವಾಮಿಗಳು ಶಿಕ್ಷಣದ ವ್ಯವಸ್ಥೆಯ ಪರಂಪರೆಯನ್ನು ಅದಕ್ಕೆ ಜೋಡಿಸಿದರು. ಸ್ವಾರಸ್ಯದ ಸಂಗತಿ ಎಂದರೆ ಶ್ರೀ ಉದ್ದಾನ ಸ್ವಾಮಿಗಳು, ಪ್ರಾರಂಭ ಮಾಡಿದ್ದು ಸಂಸ್ಕೃತ ಪಾಠಶಾಲೆಯನ್ನು. ೧೯೧೭ರಲ್ಲಿ ಅಧಿಕೃತವಾಗಿ ಪ್ರಾರಂಭವಾದ ಈ ಪಾಠ ಶಾಲೆಯಲ್ಲಿ ಬ್ರಾಹ್ಮಣ, ಲಿಂಗಾಯಿತ, ಗೌಡ, ಹರಿಜನ, ಹೀಗೆ ವಿವಿಧ ಕೋಮುಗಳಿಗೆ ಸೇರಿದ ಐವತ್ಮೂರು ವಿದ್ಯಾರ್ಥಿಗಳಿದ್ದರಂತೆ. ಇದೊಂದು ಹತ್ತೊಂಬತ್ತನೆಯ ಶತಮಾನದಲ್ಲಿ ಸಂಭವಿಸಿದ ಮಹತ್ವದ ಘಟನೆಯೆಂದೇ ತಿಳಿಯಬೇಕು. ಯಾಕೆಂದರೆ ಇಂಡಿಯಾದಂಥ ದೇಶದ ಪಾರಂಪರಿಕವಾದ ಸಂಸ್ಕೃತ ಭಾಷೆಯ ಶಿಕ್ಷಣವೆನ್ನುವುದು, ಶತಶತಮಾನಗಳ ಕಾಲ ಕೇವಲ ಮೇಲು ವರ್ಗದವರ ಗುತ್ತಿಗೆಯಾಗಿ, ಸಂಸ್ಕೃತ ಎನ್ನುವುದು, ಶೂದ್ರ ವರ್ಗದವರು ನಾಲಗೆಯಲ್ಲಿ ಉಚ್ಚರಿಸಿರುವುದಿರಲಿ ಕಿವಿಯಲ್ಲಿ ಕೇಳಬಾರದ 'ದೇವಭಾಷೆ'ಯಾಗಿ ಬಹುಸಂಖ್ಯಾತ ಶೂದ್ರ ವರ್ಗದವರು ಇದರ ಕಲಿಕೆಯ ಸವಲತ್ತುಗಳಿಂದ ವಂಚಿತರಾಗಿ ಇದ್ದ ಒಂದು ಹಿನ್ನೆಲೆಯಲ್ಲಿ ಆ ಭಾಷೆ ಹಾಗೂ ಅದು ಬಳಸಿಕೊಳ್ಳುವ ತಿಳಿವಿಗೆ, ಈ ನಿರ್ಲಕ್ಷಿತ ಸಮುದಾಯವನ್ನೂ ಹಕ್ಕುದಾರರನ್ನಾಗಿ ಮಾಡುವ ದಿಟ್ಟತನದ ಪ್ರಯತ್ನವೊಂದು, ಈ ಐತಿಹಾಸಿಕ ಘಟನೆಯಲ್ಲಿ ಅಡಗಿದೆ ಎಂದು ನಾನು ತಿಳಿದಿದ್ದೇನೆ. ಹತ್ತೊಂಭತ್ತನೆಯ ಶತಮಾನದ ವಸಾಹತುಶಾಹಿಯ ಈ ಸಂದರ್ಭದಲ್ಲಿ ಕನ್ನಡ ಅಥವಾ ಇಂಗ್ಲೀಷ್ ಶಿಕ್ಷಣ ತಾನಾಗಿಯೇ ಲಭ್ಯವಾಗಬಹುದಾಗಿದ್ದ ಪರಿಸ್ಥಿತಿಯಲ್ಲಿ, ಶ್ರೀ ಉದ್ದಾನ ಸ್ವಾಮಿಗಳು ಸಂಸ್ಕೃತ ಪಾಠ ಶಾಲೆಯೊಂದನ್ನು ಶೂದ್ರ ಸಮುದಾಯದವರಿಗಾಗಿ ಪ್ರಾರಂಭಿಸಿದ್ದರ ಚಾರಿತ್ರಿಕ ಮಹತ್ವವನ್ನು, ಪ್ರತ್ಯೇಕವಾಗಿಯೇ ನಾವು ಪರಿಭಾವಿಸಬೇಕು. ಈಗ ಅಧ್ಯಕ್ಷರಾಗಿರುವ ಶ್ರೀ ಶಿವಕುಮಾರ ಸ್ವಾಮಿಗಳು, ಹಿಂದಿನ ಆ ಎರಡೂ ಪರಂಪರೆಗಳನ್ನು ಅತ್ಯಂತ ಸಮರ್ಥವಾಗಿ ಮುಂದುವರಿಸಿ ಬಹುಸಂಖ್ಯೆ ವಿದ್ಯಾರ್ಥಿಗಳಿಗೆ ಅಶನ–ವಸತಿಗಳನ್ನು ಕಲ್ಪಿಸಿರುವುದಲ್ಲದೆ, ಆಧುನಿಕ ಯುಗದ






ಶೈಕ್ಷಣಿಕ ಅಗತ್ಯಗಳಿಗೆ ತಕ್ಕಂತೆ ಬಹುಬಗೆಯ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಿ, ಹೊಸ ಎಚ್ಚರಕ್ಕೆ ಕಾರಣರಾಗಿದ್ದಾರೆ. ಈ ಹೊತ್ತಿಗೆ ಕರ್ನಾಟಕದಾದ್ಯಂತ ನಡೆಸುತ್ತಿರುವ ಶಾಲೆ–ಕಾಲೇಜುಗಳು ಸಂಖ್ಯೆ ನೂರಮೂವತ್ತಕ್ಕೂ ಮಿಗಿಲಾಗಿದೆ ಅನ್ನುವುದು ಅವರ ಶೈಕ್ಷಣಿಕ ಸಾಧನೆಯ ಸಂಕೇತವಾಗಿದೆ.

ಅರ್ಧ ಶತಮಾನಕ್ಕೂ ಹಿಂದಿನ, ನಲವತ್ತರ ದಶಕದಲ್ಲಿ ನಾನು ಈ ಮಠದಲ್ಲಿದ್ದಾಗ, ಶಾಲೆ–ಕಾಲೇಜುಗಳಲ್ಲಿ ಓದುತ್ತ ಇಲ್ಲಿ ಆಶ್ರಯ ಪಡೆದವರ ಸಂಖ್ಯೆ ಸುಮಾರು ನಾಲ್ಕು ನೂರರಷ್ಟಿತ್ತು. ಬಹುಶಃ ಯಾವುದೇ ಒಂದು ಸಂಸ್ಥೆ ಇಷ್ಟು ಸಂಖ್ಯೆ ವಿದ್ಯಾರ್ಥಿಗಳಿಗೆ ಉಚಿತವಾದ ಅಶನ–ವಸತಿಗಳ ಅವಕಾಶವನ್ನು ಕಲ್ಪಿಸಿಕೊಟ್ಟ ನಿದರ್ಶನ, ಆ ಕಾಲಕ್ಕಂತೂ ಇರಲಿಲ್ಲ. ಹಾಗೆ ಆಶ್ರಯ ಪಡೆದವರು ಕೇವಲ ವೀರಶೈವರೇನಲ್ಲ. ಸಮಾಜದ ಶೂದ್ರ ಸಮುದಾಯದ ಬೇರೆ ಬೇರೆ ಕೋಮುಗಳವರೂ ಇದ್ದರು. ಅವರ ಜತೆಗೆ ಕೆಲವರು ಹರಿಜನರೂ ಇದ್ದರು. ಅಷ್ಟೆ ಅಲ್ಲ ಮಡಿವಂತ ವರ್ಗದ ಬ್ರಾಹ್ಮಣ ವಿದ್ಯಾರ್ಥಿಗಳಿಗೂ ಇಲ್ಲಿ ಅವಕಾಶವಿತ್ತು. ಆದರೆ ಅವರೂ ಸಹ ಬ್ರಾಹ್ಮಣೇತರರ ಪಂಕ್ತಿಯಲ್ಲಿ ಕೂತು ಊಟ ಮಾಡಬೇಕೆಂಬ ಯಾವ ನಿರ್ಬಂಧವೂ ಇರಲಿಲ್ಲ. ಅವರು ಮಠದ ಉಗ್ರಾಣದಿಂದ ಅಡುಗೆಗೆ ಬೇಕಾದ ಪದಾರ್ಥಗಳನ್ನು ಪಡೆದುಕೊಂಡು ಆ ಕಾಲಕ್ಕೆ **'ಛತ್ರ'** ಎಂದು ಕರೆಯಲಾದ ಕಟ್ಟಡವೊಂದರ ಕೊಠಡಿಗಳಲ್ಲಿ ತಾವೇ ಅಡುಗೆ ಮಾಡಿಕೊಂಡು, ತಮ್ಮ ಅಧ್ಯಯನವನ್ನು ಮುಂದುವರಿಸುವ ಅವಕಾಶ ಕಲ್ಪಿಸಲಾಗಿತ್ತು.

ನಾವೆಲ್ಲ ಮುಖ್ಯವಾಗಿ ಲಿಂಗಾಯಿತರು ಒಳಗಿನ ಭೋಜನ ಶಾಲೆಯಲ್ಲೂ, ಇನ್ನುಳಿದವರು ಹೊರಗಿನ ಭೋಜನ ಶಾಲೆಯಲ್ಲೂ ಏಕ ಕಾಲಕ್ಕೆ ಸಾಲಾಗಿ ಕೂತು, ಬಡಿಸಲಾಗುತ್ತಿದ್ದ ಒಂದೇ ಅಡುಗೆಯನ್ನು ಊಟ ಮಾಡುತ್ತಿದ್ದೆವು. ಸಾಂಪ್ರದಾಯಿಕವಾದ ಈ 'ವ್ಯತ್ಯಾಸ' ಅಂದು ಅಂಥ ದೊಡ್ಡ ಪ್ರಮಾದವೆಂದೇನೂ ತೋರುತ್ತಿರಲಿಲ್ಲ. ಮತ್ತು ಈ ಬಗೆಯ 'ವ್ಯತ್ಯಾಸ'ಗಳನ್ನು ಎತ್ತಿ ಹಿಡಿದು 'ರಾಜಕೀಯ' ಮಾಡುವ ಹವ್ಯಾಸವಾಗಲೀ ಉದ್ದೇಶವಾಗಲಿ ಯಾರಿಗೂ ಇದ್ದಂತೆ ತೋರಲಿಲ್ಲ. ಜತೆಗೆ ನಮ್ಮೆಲ್ಲರ ವಸತಿಗಳಲ್ಲಿ ಯಾವ ತಾರತಮ್ಯವೂ ಇರಲಿಲ್ಲ. ನಾವೆಲ್ಲ ಬಡವರೆಂಬ, ನಾವೊಬ್ಬ ಮನುಷ್ಯರೆಂಬ, ಆ ಕಾರಣಕ್ಕೆ ನಾವೆಲ್ಲ, ಒಂದೆಂಬ ಭಾವನೆಯೆ ಪ್ರಮುಖವಾಗಿತ್ತು. ದಿನವೂ ಸಂಜೆ ಏಳು ಗಂಟೆಗೆ ಸಾಮೂಹಿಕವಾಗಿ ಕೂತು ಪ್ರಾರ್ಥನೆ ಮಾಡುವ ಸಂದರ್ಭ ಕೂಡಾ ನಮ್ಮಲ್ಲಿ ಒಂದು ಆಧ್ಯಾತ್ಮಿಕವಾದ ಏಕತಾ ಭಾವನೆಯ ಸಂಕೇತವಾಗಿತ್ತು.

ಈಗ ಈ ಮಠದ ವಿದ್ಯಾರ್ಥಿಗಳ ಸಂಖ್ಯೆ ನಮ್ಮ ಕಾಲದ್ದಕ್ಕಿಂತ ಇಪ್ಪತ್ತುಪಟ್ಟು ಮಿಗಿಲಾಗಿದೆ. ಆದರೆ ಮಠದ ಜೀವನ ಕ್ರಮ ಕೆಲವು ವಿಚಾರಗಳಲ್ಲಿ ಬದಲಾಗಿದ್ದು ಎಲ್ಲಾ ವಿದ್ಯಾರ್ಥಿಗಳೂ ಸಾಮೂಹಿಕವಾಗಿ ಭೋಜನ ಸ್ವೀಕರಿಸುತ್ತಾರೆ. ಅಂದಿನಂತೆ ಇಂದೂ ಸಂಜೆ ನಡೆಯುವ ಪ್ರಾರ್ಥನಾ ಸಭೆ ಅಷ್ಟೇ ಗಂಭೀರವಾಗಿದೆ. ಸಹಸ್ರಾರು ವಿದ್ಯಾರ್ಥಿಗಳು ದಿನಾ ಬೆಳಿಗ್ಗೆ, ಸಂಜೆ, ಪೂಜ್ಯ ಸ್ವಾಮಿಗಳ ನಿಯಂತ್ರಣ ಕೇಂದ್ರದಲ್ಲಿ ಸಾಮೂಹಿಕ ಪ್ರಾರ್ಥನೆಯಲ್ಲಿ ತೊಡಗುವ ದೃಶ್ಯ ಒಂದು ಅಪೂರ್ವವಾದ ಅನುಭವವಾಗಿದೆ. ತಮಗೆ ಎಷ್ಟೇ ಬಿಡುವಿಲ್ಲದ ಕೆಲಸ ಕಾರ್ಯಗಳಿರಲಿ, ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು – ಸಹಸ್ರಾರು ಸಂಖ್ಯೆ ತಮ್ಮ ತರುಣ ಶಿಷ್ಯ ಸಮುದಾಯದೊಂದಿಗೆ ಪ್ರಾರ್ಥನೆಗೆ ಕೂತುಕೊಳ್ಳುವ ಈ ಸಂದರ್ಭವನ್ನು ಕಳೆದುಕೊಳ್ಳುವುದಿಲ್ಲ. ಹಾಗೆ ನೋಡಿದರೆ ಬೆಳಗಿನ ಝಾವ ಎರಡೂವರೆ ಗಂಟೆಗೆ, ಹಳೆಯ ಮಠಕ್ಕೆ ಹೋಗಿ ಸ್ನಾನಾದಿಗಳನ್ನು ಮುಗಿಸಿ ಹಲವು ಗಂಟೆಗಳ ಕಾಲ ಶಿವಪೂಜಾ ಯೋಗದಲ್ಲಿ ಮಗ್ನರಾಗುತ್ತಾರೆ. ಹೀಗೆ ಮತ್ತೆ ಇರುಳಿನ ಪೂಜೆ ಕೂಡಾ. ಜತೆಗೆ ಅಧ್ಯಯನ ಹಾಗೂ ಚಿಂತನೆ. ಅವರು ಯಾವುದೇ ಒಂದು ವಿಷಯವನ್ನು ಕುರಿತು ಉಪನ್ಯಾಸಕ್ಕೆ ನಿಂತರೆಂದರೆ, ಅದರ ಹಿಂದೆ ಅವರಿಗಿರುವ ವಿವಿಧ ತತ್ವಜ್ಞಾನ ಕ್ಷೇತ್ರಗಳ ತಿಳುವಳಿಕೆಯೂ ಹಾಗೂ ಅವರು ತಮ್ಮ ಸಮಕಾಲೀನತೆಯಲ್ಲಿ ಅವುಗಳಿಗೆ ತೋರುವ ಪ್ರತಿಕ್ರಿಯೆಯೂ ಮತ್ತು ಅವುಗಳನ್ನು ಕುರಿತು ಮಾಡುವ ವ್ಯಾಖ್ಯಾನವೂ ಕೇಳಿದವರನ್ನು ಬೆರಗುಗೊಳಿಸುತ್ತವೆ. ನಾನೇ ನನ್ನ ಎಳೆಯ ದಿನಗಳಲ್ಲಿ ಕಂಡಂತೆ ಸಂಸ್ಕೃತ ಪಾಠಶಾಲೆಯ ಚಿಕ್ಕಮಕ್ಕಳಿಗೂ ಅವರು ತರಗತಿಗಳನ್ನು ತೆಗೆದುಕೊಳ್ಳುತ್ತಿದ್ದರು. ದಿನವೂ ಬರುವ ಭಕ್ತಾದಿಗಳ ಯೋಗಕ್ಷೇಮವನ್ನು ವಿಚಾರಿಸುವುದೂ, ತೀರ ಸಾಮಾನ್ಯರಾದ ಗ್ರಾಮೀಣ ಜನರ ನಂಬಿಕೆಗಳನ್ನು ಆಘಾತಗೊಳಿಸದೆ ಅವರಿಗೆ ಅಂತ್ರ–ತಂತ್ರಾದಿಗಳನ್ನು ಬರೆದುಕೊಟ್ಟು, ಅವರನ್ನು ಸಮಾಧಾನಗೊಳಿಸುವುದೂ, ದಿನವೂ ನಡೆಯುತ್ತಿದ್ದ ಮಠದ ವಿಸ್ತರಣ ಕಾರ್ಯಗಳನ್ನು ಪರಿಶೀಲಿಸುವತ್ತ ಕೆಲಸಗಾರರಿಗೆ ಸೂಚನೆಗಳನ್ನು ಕೊಡುತ್ತ ಸಮಯ ಬಿದ್ದರೆ ತಾವೇ ಕೂಲಿಗಾರರ ಜತೆ ಹೆಗಲು ಕೊಟ್ಟು ಕೆಲಸ ಮಾಡುವುದೂ, ಇದಕ್ಕಿದ್ದ ಹಾಗೆ ಅಡುಗೆ ಮನೆಗೆ ಪ್ರವೇಶಿಸಿ, ತಾವೇ ಮುದ್ದೆ ತಿರುಹುವುದೂ, (ಭಾರಿ ಗಾತ್ರದ ಪಾತ್ರೆಗಳಲ್ಲಿ ಬೇಯುತ್ತಿದ್ದ ಮುದ್ದೆಯನ್ನು ತಿರುಹುವುದು ಸುಲಭವಾದ ಕೆಲಸವೇನಲ್ಲ. ಅದಕ್ಕೆ ಬಾಹುಬಲವೂ ಬೇಕು!) ಊಟದ ಪಂಕ್ತಿಯ ನಡುವೆ ನಿಂತು ಮಕ್ಕಳೂ ಹಾಗೂ

ಭಕ್ತಾದಿಗಳು ಊಟ ಮಾಡುವುದನ್ನು ಪ್ರೀತಿಯಿಂದ ವೀಕ್ಷಿಸುವುದೂ, ಇಂಥ ಬಹುಸಂಖ್ಯೆಯ ಕಾರ್ಯಚಟುವಟಿಕೆ ಗಳನ್ನು ನಾನು ನೋಡುತ್ತ ಅಲ್ಲಿ ಪುಟಿಯುವ ಜೀವ ಕಾರುಣ್ಯಕ್ಕೆ ಬೆರಗಾಗಿದ್ದೇನೆ.

ಒಂದು ಕಾಲವಿತ್ತು. ವೈರಾಗ್ಯ ಎಂದರೆ ಸಂನ್ಯಾಸ ಎಂದರೆ ಸಂಸಾರವನ್ನು ತೊರೆದು ಸಮಾಜವನ್ನು ತೊರೆದು ಜನಸಂಗ ದೂರವಾದ ಕಾಡುಮೇಡುಗಳಲ್ಲೋ, ಯಾರು ಪ್ರವೇಶ ಮಾಡಲಾಗದ ಗಿರಿ-ದರಿಗಳ ಗುಹಾಂತರಗಳಲ್ಲೋ ಧ್ಯಾನ ತಪಸ್ಸುಗಳಲ್ಲಿ ನಿರತರಾಗಿ ಆಧ್ಯಾತ್ಮ ಸಾಧನೆಯಲ್ಲಿ ತೊಡಗುವುದು ಎಂದು. ಆದರೆ ಬುದ್ಧನ ಕಾಲಕ್ಕೆ ಸಂನ್ಯಾಸದ ಈ ಕಲ್ಪನೆ ಬಹುಶಃ ಬದಲಾದಂತೆ ತೋರುತ್ತದೆ. ಸಿದ್ಧಾರ್ಥ ತಾನು ಬುದ್ಧನಾದ ಮೇಲೆ ಅನಿಸಿತು. ಈ ಲೋಕದ ದುಃಖ ದಾರಿದ್ರ್ಯಗಳ ನಿವಾರಣೆಗೆ ವಿನಿಯೋಗವಾಗದಿದ್ದರೆ ತಾನು ಪಡೆದ 'ಬೋಧಿ'ಗೆ ಏನರ್ಥ - ಎಂದು. ಆದ ಕಾರಣವೇ ಆ ತನ್ನ ಧರ್ಮವನ್ನು ಒಪ್ಪಿಕೊಂಡು ಒಂದು 'ಸಂಘ'ಕ್ಕೆ ಸೇರಿದ ಸನ್ಯಾಸಿಗಳಿಗೆ ಹೇಳಿದ, ಧರ್ಮ ಅನ್ನುವುದು ಬಹುಜನ ಹಿತಕ್ಕಾಗಿ, ಬಹುಜನ ಸುಖಕ್ಕಾಗಿ ತಮ್ಮನ್ನು ತಾವು ಸೇವಾ ಮನೋಭಾವದಿಂದ ತೊಡಗಿಸಿಕೊಳ್ಳುವ ಕ್ರಿಯೆಯಲ್ಲಿ ಇದೆ ಎಂದು. ಬುದ್ಧನ ಅನಂತರ ಅನೇಕ ಶತಮಾನಗಳ ಮೇಲೆ, ಕರ್ನಾಟಕ ಕಲ್ಯಾಣ ಕೇಂದ್ರದಲ್ಲಿ ಬಸವಾದಿ ಶರಣರಿಂದ ತರ-ತಮ ವಿರೋಧಿಯೂ, ಮಾನವ ಕೇಂದ್ರಿತವೂ, ಸಾಮಾಜಿಕ ಜವಾಬ್ದಾರಿಯಿಂದ ಕೂಡಿದ್ದೂ ಆಗಿದೆ. ಸಂಸಾರಿಯೇ ಆಗಲಿ; ಸಂನ್ಯಾಸಿಯೇ ಆಗಲಿ; ಈ ಮರ್ತ್ಯದ ಸಾಮಾಜಿಕ ನೆಲೆಯೊಳಗೆ ನಿಂತೇ, ಶಿವಯೋಗವನ್ನು ಸಾಧಿಸುತ್ತ, ಕಾಯಕ ಅಥವಾ ಶಿವಾರ್ಪಿತ ಮನೋಭಾವದ ದುಡಿಮೆಯಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತ ಸರ್ವಜನ ಹಿತದಲ್ಲಿ ನಿರತವಾಗ ಬೇಕೆಂಬುದೇ ಇದರ ತಿರುಳು. ಬುದ್ಧನ ಮಾನವ ಕಾರುಣ್ಯವನ್ನೂ, ಬಸವನ ತೀವ್ರ ಸಾಮಾಜಿಕ ಕಾಳಜಿಗಳನ್ನೂ ಒಟ್ಟಿಗೇ ಕಾಣಬಹುದಾದ ಸಿದ್ಧಗಂಗೆಯಂಥ ಅಪರೂಪದ ಕ್ಷೇತ್ರಗಳಲ್ಲಿ ಹಾಗೂ ಈ ಮನೋಧರ್ಮದ ಜೀವಂತ ಪ್ರತಿನಿಧಿಯಂತಿರುವ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳಂಥವರ ವ್ಯಕ್ತಿತ್ವದಲ್ಲಿ ಮಾತ್ರ.

## ಶ್ರೀವಾಣಿ

*ಆತ್ಮಗೌರವ ಜೀವನದ ಒಂದು ಮಹಾತತ್ತ್ವ. ಬದುಕಿನಲ್ಲಿ ಏನೆಲ್ಲಾ ಸುಲಭವಾಗಿ ಸಂಪಾದನೆ ಮಾಡಬಹುದು, ಸುಲಭವಾಗಿ ಕಳೆಯಲೂಬಹುದು. ಆತ್ಮಗೌರವ ಸುಲಭಸಾಧ್ಯವಿಲ್ಲ. ಅಂದರೆ ತನ್ನ ತನದ ಸಂಪಾದನೆ. ಸಂಪಾದನೆ ಎಂದ ಕೂಡಲೆ ದೇಹ ದಂಡನೆ ಅತ್ಯಾವಶ್ಯಕ, ವ್ಯವಸ್ಥಿತ ಕಾರ್ಯಯೋಜನೆ ಅತಿಮುಖ್ಯ ಕಾರ್ಯಸಾಧನೆಯಲ್ಲಿ ದೃಢಸಂಕಲ್ಪ. ಧೈರ್ಯ ಸ್ಥೈರ್ಯಗಳು ಬೇಕು. ಇಷ್ಟಾದರೂ ಸಾಲದು. ಗುರುಕೃಪೆ, ದೈವಾನುಗ್ರಹವಿರಬೇಕು. ಹಿತಕರ ವಾತಾವರಣ ಕೂಡಿಬರಬೇಕು. ಇಷ್ಟೆಲ್ಲಾ ಕೂಡಿಬಂದರೂ ''ಶ್ರೇಯಾಂಸಿ ಬಹುವಿಘ್ನಾನಿ'' ಎಂಬಂತೆ ವಿಘ್ನ ಪರಂಪರೆ ಅಡ್ಡನಿಲ್ಲುತ್ತವೆ. ಆಶೆ, ಆಮಿಷ, ರೋಷ ವಿಷಯಾದಿ ಗಳೆಲ್ಲಾ ತಮ್ಮ ಶಕ್ತಿಪ್ರದರ್ಶನ ಮಾಡಲು ಹವಣಿಸುತ್ತಿರುತ್ತವೆ. ಇಲ್ಲಿ ವ್ಯಕ್ತಿಯ ನಿಜವಾದ ಅಂತಸತ್ವ ಹೊರಬೀಳುತ್ತದೆ. ತನ್ನತನ ಪ್ರಕಟವಾಗುತ್ತದೆ. ಸಹನೆ, ತಾಳ್ಮೆ, ಜಾಗೃತಿಗಳು ಕ್ರಿಯಾಶೀಲವಾಗಬೇಕು. ಹೊಡೆತ ಬಡಿತಗಳು ಸಂಸ್ಕಾರದ ಪೆಟ್ಟುಗಳೆಂದು ಭಾವಿಸಬೇಕು. ಹಾಗಾದಾಗ ಬದುಕಿನಲ್ಲಿ ಜಯ ಲಭ್ಯವಾಗುತ್ತದೆ. ಬದುಕಿಗೊಂದು ಬೆಲೆ ದೊರೆಯುತ್ತದೆ. ಒಂದು ಮಹಾತತ್ತ್ವದ ಸಂಪಾದನೆ ಎಷ್ಟು ಕಷ್ಟವೋ ರಕ್ಷಣೆಯೂ ಅಷ್ಟೇ ಕಷ್ಟ. ನಿರಂತರ ಜಾಗೃತರಾಗಿದ್ದು ಕಾಯಬೇಕು. ತತ್ವ ಬೆಲೆ ಅರಿತ ವ್ಯಕ್ತಿ ನಿಜಕ್ಕೂ ಜಾಗೃತನಾಗಿರುತ್ತಾನೆ. ಪ್ರಾಣತೆತ್ತಾದರೂ ರಕ್ಷಣೆ ಮಾಡುತ್ತಾನೆ. ಬೆಲೆ ತಿಳಿಯದ ವ್ಯಕ್ತಿ ಕುಸಿದು ಬೀಳುತ್ತಾನೆ. ಆತ್ಮವಿಶ್ವಾಸ ಕಳೆದುಕೊಳ್ಳುತ್ತಾನೆ. ಆತನಿಗೆ ಆತ್ಮ ಗೌರವ ಕನಸಿನ ಗಂಟು. ಆತ್ಮ ನಾಶ ಖಂಡಿತ. ಅವನ ಬದುಕು ನಿರರ್ಥಕ. ಸಮಾಜದಲ್ಲಿ ಆತ ಜೀವಂತ ಶವ. ಗಳಿಕೆ ಉಳಿಕೆ ನಿಜಕ್ಕೂ ಅರ್ಥವತ್ತಾದ ಮಾತು. ಆದ್ದರಿಂದ ಆತ್ಮಗೌರವ ಆತ್ಮೋನ್ನತಿಗೆ ಸಾಧನ. ಈ ಮಹಾತತ್ವದ ಗಳಿಕೆ ಜೀವಿತದ ಧ್ಯೇಯವಾಗಬೇಕು.*





# ಮಹಾದಾಸೋಹಿ

- ಕೆ.ಜಿ. ಮರಿಯಪ್ಪ

ತ್ರಿವಿಧ ದಾಸೋಹಿ ತುಮಕೂರಿನ ಸಿದ್ಧಗಂಗಾ ಮಠಾಧೀಶರಾದ ಡಾ|| ಶಿವಕುಮರ ಸ್ವಾಮೀಜಿ ಅವರದು ಶತಮಾನ ಕಂಡ ಸಾರ್ಥಕ ಬದುಕು. ಅವರಿಗೀಗ ೧೦೫ ವರ್ಷ. ಶಿಕ್ಷಣ ಮತ್ತು ಧಾರ್ಮಿಕ ಕ್ಷೇತ್ರದಲ್ಲಿ ಅವರಷ್ಟು ದೀರ್ಘ ಕಾಲ ಶ್ರಮಿಸಿದ ಹಿರಿಯ ಚೇತನ ಇನ್ನೊಂದಿಲ್ಲ. ಕಳೆದ ಏಳು ದಶಕಗಳಿಂದ ಅವರು ಗಂಧದ ಕೊರಡಿನಂತೆ ತಮ್ಮನ್ನು ತಾವೇ ತೇಯ್ದುಕೊಂಡು ಸುತ್ತಲಿನ ಸಮಾಜಕ್ಕೆ ಪರಿಮಳ ನೀಡುತ್ತ ಬಂದಿದ್ದಾರೆ. ದೀಪದಂತೆ ಉರಿದು ಇತರರಿಗೆ ಬೆಳಕು ನೀಡಿದ್ದಾರೆ. ಲಕ್ಷಾಂತರ ಜನರಿಗೆ ಮಾರ್ಗದರ್ಶನ ಮಾಡಿದ್ದಾರೆ.

ಸ್ವಾಮೀಜಿ ಅಕ್ಷರಶಃ ಕಾಯಕಜೀವಿ. ಶಿಕ್ಷಣದಿಂದ ಮನುಷ್ಯನ ಉದ್ಧಾರ ಎಂದು ಬಲವಾಗಿ ನಂಬಿದವರು. ಶಿಕ್ಷಣ ಮತ್ತು ಪ್ರಖರ ಆಧ್ಯಾತ್ಮದ ಬೆಳಕಿನಿಂದ ಜನರಿಗೆ ಧರ್ಮದ ದಾರಿ ತೋರಿಸುತ್ತ ಬಂದಿದ್ದಾರೆ. ಕಳೆದ ಏಳು ದಶಕಗಳ ಅವಧಿಯಲ್ಲಿ ಲಕ್ಷಾಂತರ ವಿದ್ಯಾರ್ಥಿಗಳಿಗೆ ಅನ್ನದಾಸೋಹ ಮತ್ತು ಅಕ್ಷರ ದಾಸೋಹದ ಮೂಲಕ ಬದುಕುವ ದಾರಿ ತೋರಿಸಿದ್ದಾರೆ. ಅವರು ನಿರಂತರ ಪರಿಶ್ರಮದಿಂದ ಸಿದ್ಧಗಂಗಾ ಮಠ ಇಂದು ಇಡೀ ದೇಶದ ಗಮನ ಸೆಳೆದಿದೆ. ಶಿಕ್ಷಣ ಪ್ರಸಾರಕ್ಕೆ ಮಠ ಸಾರ್ವಕಾಲಿಕ ಮಾದರಿಯಾಗಿದೆ. ಸ್ವಾಮೀಜಿ ಸಾಧನೆಯ ಶಿಖರದಲ್ಲಿದ್ದಾರೆ. ಆದರೆ ಅಲ್ಲಿಗೆ ಸಾಗಿ ಬಂದ ಹಾದಿ ಹೂವಿನ ಹಾಸಿಗೆಯಾಗಿರಲಿಲ್ಲ. ಅದು ಒಂದೆರಡು ವರ್ಷಗಳ ಪರಿಶ್ರಮದ ಫಲವೂ ಅಲ್ಲ. ಅದು ಸತತ ಏಳು ದಶಕಗಳ ತಪಸ್ಸಿನ ಫಲ. ಶಿಕ್ಷಣ ವಂಚಿತ ದುರ್ಬಲ ವರ್ಗಗಳ ಗ್ರಾಮೀಣ ಮಕ್ಕಳಿಗೆ ಸ್ವಾಮೀಜಿ ಶಿಕ್ಷಣ ನೀಡುವುದರ ಜೊತೆಗೆ ಧರ್ಮದ ದಾರಿಯಲ್ಲಿ ನಡೆಯುವುದನ್ನು ಅವರಿಗೆ ಕಲಿಸಿದರು. ಅದಕ್ಕಾಗಿ ತಮ್ಮ ಬದುಕನ್ನೇ ಮೀಸಲಿಟ್ಟು ದುಡಿದರು. ಅವರ ಶಿಕ್ಷಣ ಸಂಸ್ಥೆಗಳಲ್ಲಿ ಓದಿದ ಲಕ್ಷಾಂತರ ಜನರು ಇಂದು ಸಮಾಜದ ಎಲ್ಲ ಕ್ಷೇತ್ರಗಳಲ್ಲೂ ಇದ್ದಾರೆ. ಸಿದ್ಧಗಂಗಾಮಠದ ವಿದ್ಯಾರ್ಥಿ ಬಳಗ ಬಹು ದೊಡ್ಡದು. ಸ್ವಾಮೀಜಿ ಅವರ ಶಿಷ್ಯ ಬಳಗ ಅದಕ್ಕಿಂತ ದೊಡ್ಡದು. ಅವರನ್ನು ಆರಾಧ್ಯ ದೈವ ಎಂದೇ ಭಾವಿಸಿದ ಭಕ್ತರ ಸಂಖ್ಯೆ ಇನ್ನೂ ದೊಡ್ಡದು.

ಸ್ವಾಮೀಜಿ ಅವರಿಗೆ ೧೦೫ ವರ್ಷಗಳಾದರೂ ಇಂದಿಗೂ ಅವರು ಕನ್ನಡದ ಸಹಾಯವಿಲ್ಲದೆ ಓದುತ್ತಾರೆ ಮತ್ತು ಬರೆಯುತ್ತಾರೆ. ಗಂಟೆಗಟ್ಟಲೆ ಕುಳಿತು ಭಕ್ತರೊಂದಿಗೆ ಸಮಾಲೋಚನೆ ನಡೆಸುತ್ತಾರೆ. ಅವರ ಪ್ರವಚನ ಎಂಥವರನ್ನೂ ಸೂಜಿಗಲ್ಲಿನಂತೆ ಸೆಳೆಯಬಲ್ಲದು.

ಸಿದ್ಧಗಂಗಾಮಠದ ಪೀಠಾಧಿಪತಿಯಾಗಿ ಅವರು ಅಧಿಕಾರ ವಹಿಸಿಕೊಂಡಾಗ ಮಠದಲ್ಲಿ ಇದ್ದದ್ದು ೩೦೦ ರೂಪಾಯಿ. ಆ ಮೂಲಧನದಿಂದ ಮಠದಲ್ಲಿ ಅನ್ನ ದಾಸೋಹ ಹಾಗೂ ಶಿಕ್ಷಣ ಪ್ರಸಾರ ಕಾರ್ಯವನ್ನು ಕೈಗೆತ್ತಿಕೊಂಡ ಸ್ವಾಮೀಜಿ ಹತ್ತಾರು ಶಾಲಾ, ಕಾಲೇಜುಗಳನ್ನು ನಿರ್ಮಿಸಿದ್ದಾರೆ. ಜೋಳಿಗೆ ಹಿಡಿದು ಬಂದ ಶ್ರೀಗಳನ್ನು ಯಾರೂ ಬರಿಗೈಯಲ್ಲಿ ಕಳುಹಿಸಿಲ್ಲ. ಭಿಕ್ಷಾಟನೆ ಮೂಲಕ ಸಂಗ್ರಹಿಸಿದ ದವಸ, ಧಾನ್ಯ ಹಾಗೂ ಹಣವನ್ನು ಬಳಸಿಕೊಂಡು ಮಠವನ್ನು ಕಟ್ಟಿ ಈ ಮಟ್ಟಕ್ಕೆ ಬೆಳೆಸಿದ್ದಾರೆ. ೧೦೫ರ ಇಳಿ ವಯಸ್ಸಿನಲ್ಲೂ ಶಿವರಾತ್ರಿಯ ಜಾತ್ರೆಯ ಸಮಯದಲ್ಲಿ ತುಮಕೂರು ನಗರದಲ್ಲಿ ಸ್ವಾಮೀಜಿ ಪಾದಯಾತ್ರೆ ಮಾಡಿ ಜಾತ್ರೆಗೆ ಬೇಕಾದ ವಸ್ತುಗಳನ್ನು ಸಂಗ್ರಹಿಸುತ್ತಾರೆ. ಸ್ವಾಮೀಜಿ ಬಂದರೆ ದಾನಿಗಳ ಕೈ ದೊಡ್ಡದಾಗುತ್ತದೆ.

ಅವರು ನೆಟ್ಟ ಅಕ್ಷರ ಮತ್ತು ಅನ್ನ ದಾಸೋಹದ ಬೀಜ ಹೆಮ್ಮರವಾಗಿ ಬೆಳೆದು ನೂರಾರು ಬಿಳಲುಗಳನ್ನು ಬಿಟ್ಟಿದೆ. ಪ್ರಾಥಮಿಕ ಶಿಕ್ಷಣದಿಂದ ಹಿಡಿದು ಇಂಜಿನಿಯರಿಂಗ್, ಔಷಧ ವಿಜ್ಞಾನ, ಪದವಿ, ಶಿಕ್ಷಕರ ತರಬೇತಿ ಇತ್ಯಾದಿ ಹತ್ತಾರು ಕಾಲೇಜುಗಳು ತುಮಕೂರು, ಬೆಂಗಳೂರು ಜಿಲ್ಲೆಗಳಲ್ಲಿ ತಲೆ ಎತ್ತಿವೆ. ೧೨೫ ಕ್ಕೂ ಹೆಚ್ಚು ಶಿಕ್ಷಣ ಸಂಸ್ಥೆಗಳನ್ನು ಸ್ವಾಮೀಜಿ ಸ್ಥಾಪಿಸಿ ಮುನ್ನಡೆಸುತ್ತಿದ್ದಾರೆ. ಈ ಶಾಲಾ, ಕಾಲೇಜುಗಳಲ್ಲಿ ಐವತ್ತು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳು ಶಿಕ್ಷಣ ಪಡೆಯುತ್ತಿದ್ದಾರೆ. ಮೂರು ಸಾವಿರಕ್ಕೂ ಹೆಚ್ಚು ಜನರು ಈ ಸಂಸ್ಥೆಗಳಲ್ಲಿ ದುಡಿಯುತ್ತಿದ್ದಾರೆ. ಮಠದಲ್ಲಿ ಇದ್ದುಕೊಂಡು ಓದಿ ಮುಂದೆ ಬಂದ ಲಕ್ಷಾಂತರ ಜನರು ದೇಶದ ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ.

ಶ್ರೀಮಠದ ಆವರಣದಲ್ಲಿರುವ ಶಾಲೆಗಳಲ್ಲಿ ೯ ಸಾವಿರ ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿದ್ದಾರೆ. ೧೯೧೭ರಲ್ಲಿ ವಿದ್ಯಾರ್ಥಿ ನಿಲಯ ಆರಂಭವಾದಾಗ ಅದರಲ್ಲಿ ೫೨ ವಿದ್ಯಾರ್ಥಿಗಳಿದ್ದರು. ತುಮಕೂರು ಹಾಗೂ ಅದರ ಸುತ್ತಮುತ್ತಲಿನ ಜಿಲ್ಲೆಗಳ ವಿದ್ಯಾರ್ಥಿಗಳಲ್ಲದೆ ಉತ್ತರ ಕರ್ನಾಟಕದ ಜಿಲ್ಲೆಗಳ ಬಡ ಮಕ್ಕಳು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಈ ವಿದ್ಯಾರ್ಥಿಗಳಿಗೆ ಮಠದಲ್ಲೇ ನಿತ್ಯದ ಪ್ರಸಾದ ವ್ಯವಸ್ಥೆ ಇದೆ. ಮಠದ ವಿದ್ಯಾರ್ಥಿಗಳಲ್ಲದೆ, ಅವರನ್ನು ನೋಡಲು ಬರುವ ಪಾಲಕರು ಹಾಗೂ ಭಕ್ತರು ಸೇರಿದಂತೆ ಹತ್ತು ಸಾವಿರಕ್ಕೂ ಹೆಚ್ಚು ಜನರಿಗೆ ಮಠದಲ್ಲಿ ನಿತ್ಯಪ್ರಸಾದದ ವ್ಯವಸ್ಥೆ ಇದೆ. ಸುಮಾರು ಎರಡು ಶತಮಾನದ ಹಿಂದೆ ಅಡ(ಟ)ವಿ ಸ್ವಾಮಿಗಳು

ಹೊತ್ತಿಸಿದ ಒಲೆ ಇಂದಿಗೂ ಉರಿಯುತ್ತಲೇ ಇದೆ. ಅನ್ನ ದಾಸೋಹ ಮಠದ ಬಹುದೊಡ್ಡ ಸೇವಾಕಾರ್ಯ.

ಕಾಯಕವೇ ಕೈಲಾಸ ಎಂಬುದು ಸ್ವಾಮೀಜಿಯವರ ಮೂಲಮಂತ್ರ. ಈ ಇಳಿವಯಸ್ಸಿನಲ್ಲೂ ಅವರು ಪಾದರಸದಂತೆ ಚುರುಕಾಗಿ ಕಾರ್ಯ ನಿರ್ವಹಿಸುತ್ತಾರೆ. ಅವರ ನೇತೃತ್ವದಲ್ಲಿ ಶ್ರೀಮಠದ ಎಲ್ಲ ಕೆಲಸ ಕಾರ್ಯಗಳೂ ಅನೂಚಾನವಾಗಿ ನಡೆಯುತ್ತವೆ. ಪ್ರತಿಯೊಂದು ಚಟುವಟಿಕೆಯ ಹಿಂದೆ ಅವರ ಕರ್ತೃತ್ವ ಶಕ್ತಿ ಪ್ರೇರಣೆ ನೀಡುತ್ತ ಬಂದಿದೆ. ಸೂರ್ಯೋದಯಕ್ಕೆ ಸಾಕಷ್ಟು ಮೊದಲೇ ಎದ್ದು, ನಿತ್ಯಕರ್ಮ ಮುಗಿಸಿ ಪೂಜೆಯಲ್ಲಿ ತೊಡಗುತ್ತಾರೆ. ೬ ಗಂಟೆಗೆ ಮಠದಿಂದ ಹೊರಬಂದು ೬.೩೦ಕ್ಕೆ ಮಠದ ವಿದ್ಯಾರ್ಥಿಗಳ ಜತೆ ಸಾಮೂಹಿಕ ಪ್ರಾರ್ಥನೆಯಲ್ಲಿ ತೊಡಗುತ್ತಾರೆ. ನಂತರ ದಿನಪತ್ರಿಕೆಗಳನ್ನು ಓದುತ್ತಾರೆ. ನಂತರ ಮಠದ ಆಡಳಿತ ಕಡತಗಳನ್ನು ಪರಿಶೀಲಿಸಿ, ಸಂಬಂಧಿಸಿದರಿಗೆ ಸಲಹೆ, ಸೂಚನೆ ನೀಡುತ್ತಾರೆ. ನಂತರ  ಮಠದ ಆವರಣದಲ್ಲಿ ಭಕ್ತರ ಭೇಟಿ. ಮಧ್ಯಾಹ್ನ ಪುನಃ ಸ್ನಾನ ಮತ್ತು ಪೂಜೆ. ಭೋಜನದ ನಂತರ ಸ್ವಲ್ಪ ಸಮಯ ವಿಶ್ರಾಂತಿ. ಸಂಜೆ ಮತ್ತೆ ಪೂಜೆ ಮತ್ತು ಭಕ್ತರ ಭೇಟಿ. ರಾತ್ರಿ ಸ್ವಲ್ಪ ಹೊತ್ತು ಓದುತ್ತಾರೆ. ರಾತ್ರಿ ೧೧ ಗಂಟೆಗೆ ಮಲಗುತ್ತಾರೆ. ಇದು ಸ್ವಾಮೀಜಿಗಳ ದಿನಚರಿ.

ಸ್ವಾಮೀಜಿಯವರ ಪೂರ್ವಾಶ್ರಮದ ಹೆಸರು ಶಿವಣ್ಣ. ಬೆಂಗಳೂರು ಗ್ರಾಮಾಂತರ ಜಿಲ್ಲೆ (ಈಗ ರಾಮನಗರ ಜಿಲ್ಲೆ) ಮಾಗಡಿ ತಾಲ್ಲೂಕಿನ ವೀರಾಪುರ ಗ್ರಾಮದ ಕೃಷಿ ಕುಟುಂಬದ ಹೊನ್ನೇಗೌಡ (ಹೊನ್ನಪ್ಪ) ಹಾಗೂ ಗಂಗಮ್ಮ ದಂಪತಿಗೆ ೧೩ ಮಕ್ಕಳು. (೮ ಗಂಡು, ೫ ಹೆಣ್ಣು ಮಕ್ಕಳು) ಗಂಡು ಮಕ್ಕಳಲ್ಲಿ ಕೊನೆಯವರು ಶಿವಣ್ಣ. ೧೯೦೮ ಏಪ್ರಿಲ್ ೧ರಂದು ಜನಿಸಿದ ಶಿವಣ್ಣ ಚಿಕ್ಕ ವಯಸ್ಸಿನಲ್ಲೇ ಧೈರ್ಯ, ಸಾಹಸ ಪ್ರವೃತ್ತಿಯ ಜತೆಗೆ ಭಕ್ತಿಯನ್ನೂ ರೂಢಿಸಿಕೊಂಡಿದ್ದರು. ಶಿವಣ್ಣನ ತುಂಟತನವನ್ನು ತಡೆಯುವುದು ತಂದೆ ತಾಯಿಗಳಿಗೆ ಕಷ್ಟವಾಗುತ್ತಿತ್ತಂತೆ. ೮ನೇ ವಯಸ್ಸಿಗೆ ತಾಯಿಯನ್ನು ಕಳೆದುಕೊಂಡ ಶಿವಣ್ಣ ದೃತಿಗೆಡದೆ ಶಿಕ್ಷಣ ಮುಂದುವರಿಸಿದರು. ವೀರಾಪುರ ಹಾಗೂ  ಪಕ್ಕದ ಪಾಲನಹಳ್ಳಿಯಲ್ಲಿ ಪ್ರಾಥಮಿಕ ಶಿಕ್ಷಣ ಪಡೆದರು. ನಾಗವಲ್ಲಿಯಲ್ಲಿ ಹೈಸ್ಕೂಲ್ ಮುಗಿಸಿ ಕಾಲೇಜು ಶಿಕ್ಷಣಕ್ಕಾಗಿ ತುಮಕೂರಿಗೆ  ಬಂದರು. ಆಗ ಕಾಳಪ್ಪ ಎಂಬುದರ ಪರಿಚಯವಾಗಿ ಸ್ನೇಹ ಬೆಳೆಯಿತು. ಆ ನಂತರ ಸಿದ್ಧಗಂಗಾ ಮಠದ ಸಂಪರ್ಕಕ್ಕೆ ಬಂದರು. ಆದರೆ ಮಠದಲ್ಲಿ ಆಶ್ರಯ ಸಿಗಲಿಲ್ಲ. ಕಾಲೇಜು ಶಿಕ್ಷಣದ ಕೊನೆಯ ನಾಲ್ಕು ತಿಂಗಳು ಮಠದಲ್ಲಿ ಇದ್ದು ಓದು ಮುಗಿಸಿದರು. ಮಠದ ಪೀಠಾಧ್ಯಕ್ಷರಾದ ಉದ್ದಾನಶಿವಯೋಗಿಗಳು ತಮ್ಮ ಶಿಷ್ಯ ಮರುಳಾರಾಧ್ಯರನ್ನು ತಮ್ಮ ಉತ್ತರಾಧಿಕಾರಿಯನ್ನಾಗಿ ನೇಮಕ ಮಾಡಿದ್ದರು. ಮರುಳಾರಾಧ್ಯರು ಶಿವಣ್ಣನ ಅಚ್ಚು ಮೆಚ್ಚಿನ ಗುರುವಾಗಿದ್ದರು. ಅವರ ಮೂಲಕ ಶಿವಣ್ಣ ಉದ್ದಾನಶಿವಯೋಗಿಗಳ ಸಂಪರ್ಕ ಸಾಧಿಸಿದ್ದರು. ಶಿವಯೋಗಿಗಳನ್ನು ಕಂಡರೆ ಶಿವಣ್ಣನಿಗೆ ಅಪಾರ ಭಕ್ತಿ, ಗೌರವ.

ಶಿಕ್ಷಣದ ಸಲುವಾಗಿ ಶಿವಣ್ಣ ಬೆಂಗಳೂರಿ ಸೆಂಟ್ರಲ್ ಕಾಲೇಜು ಸೇರಿದ್ದರು. ಆದರೂ ಮಠದ ಸಂಪರ್ಕ ಮುಂದುವರಿದಿತ್ತು. ಸಮಯ ಸಿಕ್ಕಾಗಲೆಲ್ಲ ಮಠಕ್ಕೆ ಬಂದು ಹೋಗುತ್ತಿದ್ದರು. ೧೯೩೦ರಲ್ಲಿ ಮರುಳಾರಾಧ್ಯರು ಅಕಾಲಿಕವಾಗಿ ಲಿಂಗೈಕ್ಯರಾದರು. ಆಗ ಉದ್ದಾನ ಶಿವಯೋಗಿಗಳು ಶಿವಣ್ಣನನ್ನೇ ತಮ್ಮ ಉತ್ತರಾಧಿಕಾರಿ ಎಂದು ಘೋಷಿಸಿದರು.

ಅನಿರೀಕ್ಷಿತವಾಗಿ ಬಂದ ಉತ್ತರಾಧಿಕಾರಿ 'ಭಾಗ್ಯ'ವನ್ನು ತಿರಸ್ಕರಿಸಲು ಅವರ ಮನಸ್ಸು ಒಪ್ಪಲಿಲ್ಲ. ಶಿಕ್ಷಣ ಮುಗಿಸಿ ಉದ್ಯೋಗಕ್ಕೆ ಸೇರಿ ಕುಟುಂಬದ ಜವಾಬ್ದಾರಿ ಹೊರುವ ಕನಸು ಕಂಡಿದ್ದ ಶಿಕ್ಷಣ ಮಠಾಧಿಪತಿ ಆಗುತ್ತೇನೆಂದು ನಿರೀಕ್ಷಿಸಿರಲಿಲ್ಲ.

ಮಠದ ಉತ್ತರಾಧಿಕಾರಿಯಾಗಿ ನೇಮಕಗೊಂಡ ನಂತರ ಅವರು ಉನ್ನತ ಶಿಕ್ಷಣ ಮುಂದುವರಿಸಲು ಬೆಂಗಳೂರಿಗೆ ತರಳಿದರು. ವಿಷಯ ತಿಳಿದು ಅವರ ಕುಟುಂಬ ಸದಸ್ಯರು ಆಘಾತಗೊಂಡರು. ಮಠದ ಜವಾಬ್ದಾರಿ ಹೊರುವ ನಿರ್ಧಾರವನ್ನು ಪುನರ್ ಪರಿಶೀಲಿಸುವಂತೆ ಒತ್ತಾಯಿಸಿದರು. ಕುಟುಂಬ ಸದಸ್ಯರ ಕಣ್ಣೀರಿಗೆ ಶ್ರೀಗಳು ಕರಗಲಿಲ್ಲ. ೧೯೪೧ರಲ್ಲಿ ಉದ್ದಾನ ಶಿವಯೋಗಿಗಳ ನಿಧನದ ನಂತರ ಮಠದ ಉತ್ತರಾಧಿಕಾರಿಯಾಗಿ ಅಧಿಕಾರ ವಹಿಸಿಕೊಂಡರು. ಮಠವನ್ನು ಇದುವರೆಗೂ ಮುನ್ನಡೆಸಿಕೊಂಡು ಬಂದು ಅದನ್ನು ಬಹು ಎತ್ತರಕ್ಕೆ ತೆಗೆದುಕೊಂಡು ಹೋದರು.

ಸ್ವಾಮೀಜಿ ಅವರನ್ನು ಅವರ ಭಕ್ತರು ನಡೆದಾಡುವ ದೇವರು, ತ್ರಿವಿಧ ದಾಸೋಹಿ, ಅಭಿನವ ಬಸವಣ್ಣ ಮೊದಲಾದ ಹೆಸರಿನಲ್ಲಿ ಕರೆದು ಗೌರವ ತೋರಿಸುತ್ತಾರೆ. ೧೯೬೫ರಲ್ಲೇ ಕರ್ನಾಟಕ ವಿಶ್ವವಿದ್ಯಾಲಯ ಸ್ವಾಮೀಜಿ ಅವರಿಗೆ ಗೌರವ ಡಾಕ್ಟರೇಟ್ ನೀಡಿ ಅವರ ಶಿಕ್ಷಣ ದಾಸೋಹ ಕಾಯಕವನ್ನು ಮೊದಲು ಗುರುತಿಸಿತು. ರಾಜ್ಯ ಸರ್ಕಾರ ಅವರಿಗೆ '**ಕರ್ನಾಟಕರತ್ನ**' ನೀಡಿ ಗೌರವಿಸಿದೆ.

ಸ್ವಾಮೀಜಿ ಅವರದು ಸರಳ ಬದುಕು. ನಿರಾಡಂಬರ ವ್ಯಕ್ತಿತ್ವ. ಕಾರಿನಲ್ಲಿ ಪ್ರಯಾಣ ಮಾಡುವ ಅನಿವಾರ್ಯತೆ ಬಿಟ್ಟರೆ ಉಳಿದಂತೆ ಅವರದು ಸರಳ ಜೀವನ. ಕಾವಿ ಬಣ್ಣ ಖಾದಿ ಅವರ ಉಡುಪು.

ಏಳು ದಶಕಗಳ ಕಾಲ ಮಠವನ್ನು ಕ್ರಿಯಾಶೀಲವಾಗಿ ಮುನ್ನಡೆಸಿಕೊಂಡು ಬಂದಿದ್ದು ಅವರ ಸಾಧನೆ. ಶ್ರೀಮಠ ಇಂದು ಹೆಮ್ಮರವಾಗಿ ಬೆಳೆದು ನಿಂತಿದೆ ಮತ್ತು ನಿರಂತರ ಅಕ್ಷರ ಹಾಗೂ ಅನ್ನ ದಾಸೋಹ ಸೇವೆಯ ಮೂಲಕ ಮುನ್ನಡೆಯುತ್ತಿದೆ.

(ಕೃಪೆ : ಪ್ರಜಾವಾಣಿ - ವಾರದ ವ್ಯಕ್ತಿ) ❑





# ಸಿದ್ಧಗಂಗೆಯ ಸಿದ್ಧಪುರುಷ

- ಬಿ.ವಿ. ಮಲ್ಲಾಪುರ
'ನಿತ್ಯೋತ್ಸವ', ೧೪ನೆಯ ಅಡ್ಡರಸ್ತೆ,
ನವೋದಯ ನಗರ, ಧಾರವಾಡ-೩.

ದರ್ಶನ ಮಾತ್ರದಿಂದ ಸದುಹೃದಯದ ಸದ್ಭಕ್ತರ ಅಂತರಂಗದಲ್ಲಿ ಭಕ್ತಿಯ ತರಂಗಗಳನ್ನು ಉದ್ಬುದ್ಧಗೊಳಿಸಬಲ್ಲ ನಿಬ್ಬೆರಗಿನ ಮಹಾಮೂರ್ತಿ ಸಿದ್ಧಗಂಗೆಯ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳೆಂಬುದಕ್ಕೆ ನನ್ನ ಅನುಭವದ ಹಿನ್ನೆಲೆಯಲ್ಲಿ ಕಂಡುಕೊಂಡು ಸತ್ಯ.

ಅವರ ಮಾನವೀಯತೆ, ವೀರವಿರಕ್ತಿ, ಜಾತ್ಯಾತೀತ ಮನೋಭಾವನೆ ವೈಚಾರಿಕತೆ, ಮುಖ್ಯವಾಗಿ ಜಾತಿ-ಮತ-ಪಂಥಗಳ ಭೇದವಿಲ್ಲದೆ ಸಹಸ್ರಾರು ಬಡ ವಿದ್ಯಾರ್ಥಿಗಳಿಗಾಗಿ ನಡೆಸುತ್ತಿರುವ ಸುವ್ಯಸ್ಥಿತ ಪವಾಡಸದೃಶ ಮಹಾಪ್ರಸಾದ ನಿಲಯ ಮತ್ತು ತ್ರಿವಿಧ ದಾಸೋಹದ ಬಗ್ಗೆ ಓದಿ ಕೇಳಿ ತಿಳಿದಿದ್ದೆ. ಆದರೆ ಅವರ ಪುಣ್ಯದರ್ಶನ ಮಾತ್ರ ಏನಕೇನ ಕಾರಣಗಳಿಂದ ಸಾಧ್ಯವಾಗಿರಲಿಲ್ಲವಾದರೂ, ಪೂಜ್ಯರನ್ನು ಕಾಣುವ ಬಯಕೆ ಮಾತ್ರ ಬತ್ತಿರಲಿಲ್ಲ.

*"ಬರುವುದೇನುಂಟೊಮ್ಮೆ ಬರುವ ಕಾಲಕೆ ಬಹುದು. ಬಯಕೆ ಬರುವುದರ ಕಣ್ ಸನ್ನೆ ಕಾಣೊ"* ಎಂಬ ಅನುಭಾವ ಕವಿಯೊಬ್ಬನ ಮಾತಿನಲ್ಲಿರುವ ಸತ್ಯದ ಸಾಕ್ಷಾತ್ಕಾರ ನನಗಾದುದು ನಿಜಕ್ಕೂ ಒಂದು ಯೋಗಾಯೋಗ.

ನನ್ನ ಅಳಿಯಂದಿರಾದ ಶ್ರೀ ಎಚ್.ಎಂ. ಭಾರತೇಶ ಅವರು ಪಾವಗಡದಲ್ಲಿ ನ್ಯಾಯಾಧೀಶರಾಗಿದ್ದರು. ಅಲ್ಲಿ ಯಾವುದೋ ಒಂದು ಸಂತೋಷದ ಸಂದರ್ಭದಲ್ಲಿ ಬಂಧು-ಬಳಗದವರೆಲ್ಲ ಸೇರಿದ್ದೆವು. ಆಗ ಸುಪ್ರಸಿದ್ಧ ಪುಣ್ಯಕ್ಷೇತ್ರವಾದ ಸಿದ್ಧಗಂಗೆಯ ಮಠ ಮತ್ತು ಅದರ ಕರ್ಣಧಾರತ್ವವನ್ನು ವಹಿಸಿದ ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ದರ್ಶನ ಪಡೆಯುವ ಕಾರ್ಯಕ್ರಮ ಹಾಕಿಕೊಂಡೆವು.

ನಾವೆಲ್ಲ ಸಿದ್ಧಗಂಗಾ ಮಠಕ್ಕೆ ಹೋದಾಗ ಪೂಜ್ಯಶ್ರೀಗಳು ಮಠದಲ್ಲಿರಲಿಲ್ಲ. ಅಲ್ಲಿಯೇ ಸಮೀಪದಲ್ಲಿದ್ದ ಶ್ರೀಮಠದ ಜಮೀನಿನಲ್ಲಿ ದೈಹಿಕ ಶ್ರಮಯುಕ್ತ ಕಾರ್ಯಕ್ರಮದಲ್ಲಿ ತೊಡಗಿದ್ದ ವಿಷಯ ನಮಗೆ ತಿಳಿದಾಗ ನಾವು ಆಶ್ಚರ್ಯಚಕಿತರಾದೆವು. ನಾನು ನಿಜವಾಗಿಯೂ ದಂಗಾಗಿ ಹೋದೆ. ಅಂತಹ ದೊಡ್ಡ ಮಠದ ಅಧಿಪತಿಗಳಾದ ಶ್ರೀಗಳು, ದೈಹಿಕ ಶ್ರಮಯುಕ್ತ ಕಾಯಕದಲ್ಲಿ ನಿರತರಾಗಿರುವುದನ್ನು ನೆನೆದಾಗ, ಬಸವಾದಿ ಪ್ರಮಥರು ಪ್ರತಿಪಾದಿಸಿದ ಕಾಯಕ ಸಿದ್ಧಾಂತದಲ್ಲಿ ಪೂಜ್ಯರಿಗಿದ್ದ ಅಚಲನಿಷ್ಠೆಯ ಅರಿವು ನನಗಾಗದೆ ಹೋಗಲಿಲ್ಲ. ಇಲ್ಲಿ ಗಮನಿಸಬೇಕಾದ ಒಂದು ಮಹತ್ವದ ಅಂಶವೆಂದರೆ ಕಾಯಕದ ಬಗೆಗಿನ ತಮ್ಮ ನಿಷ್ಠೆಯನ್ನು ಇತರ ಹಲವಾರು ಸ್ವಾಮಿಗಳಂತೆ ಕೇವಲ ಉಪದೇಶದ ಮಟ್ಟಕ್ಕೇ ನಿಲ್ಲಿಸದೆ, ಆ ನಿಷ್ಠೆಯನ್ನು ಕಾರ್ಯರೂಪಕ್ಕೆ ಇಳಿಸಿದುದು. ಶ್ರೀಗಳವರ ಈ ಬಗೆಯ ಸನ್ನಡತೆ 'ನನ್ನ ಮೇಲೆ ಅಚ್ಚಳಿಯದ ಪ್ರಭಾವ ಬೀರುವ ಜೊತೆಗೆ, ಅವರ ಬಗೆಗಿನ ಭಕ್ತಿ-ಗೌರವಗಳು ನನ್ನಲ್ಲಿ ಇಮ್ಮಡಿ ಮುಮ್ಮಡಿಗೊಂಡವು. ಮಾನವ ಜನಾಂಗಕ್ಕೆ ಸರಿಯಾದ ಮಾರ್ಗದರ್ಶನ ಮಾಡಬಲ್ಲ ಬೆಳಕಿನ ಪುಂಜವೊಂದು ಶ್ರೀಮಠದಲ್ಲಿ ಜಾಜ್ವಲ್ಯಮಾನವಾಗಿರುವುದನ್ನು ನೆನೆದು ತುಂಬಾ ಖುಷಿಪಟ್ಟೆ. ನಾವು ಹಾದಿ ಕಾಯುತ್ತಿರುವುದನ್ನು ತಿಳಿದು ಶ್ರೀಮಠಕ್ಕೆ ಆಗಮಿಸಿ ಪೂಜ್ಯರು ನಮ್ಮೆಲ್ಲರಿಗೆ ದರ್ಶನವಿತ್ತು ಆಶೀರ್ವದಿಸಿದ್ದು ಒಂದು ಪುಣ್ಯ ವಿಶೇಷ. ಅಂದು ಶ್ರೀಮಠದಲ್ಲಿ ನಮಗೆ ದೊರೆತ ಅತಿಥಿಸತ್ಕಾರದ ಸಿಹಿ ನೆನಪು ಇನ್ನೂ ನನ್ನ ಮನಸ್ಸಿನಲ್ಲಿ ಹಚ್ಚ ಹಸಿರಾಗಿಯೇ ಇದೆ.

ಪೂಜ್ಯರ ದರ್ಶನಭಾಗ್ಯ ಮತ್ತೆ ನನಗೆ ಒದಗಿ ಬಂದುದು, ಆಗಿನ ಧಾರವಾಡ ಜಿಲ್ಲೆ (ಈಗಿನ ಗದಗ ಜಿಲ್ಲೆ)ಯ ರೋಣ ತಾಲ್ಲೂಕಿನ ನರೇಗಲ್ ಗ್ರಾಮದಲ್ಲಿ. ಹಾಲಕೆರೆಯ ಶ್ರೀ ಅನ್ನದಾನೀಶ್ವರ ಮಠದ ಪಟ್ಟಾಧಿಕಾರಿಗಳಾದ ಪೂಜ್ಯ ಶ್ರೀ ಸಂಗನಬಸವ ಮಹಾಸ್ವಾಮಿಗಳವರು ತಾವು ಆರಂಭಿಸಿದ ಅನನ್ಯ ಬಗೆಯ ಸಂಚಾರಿ ಬಸವ ಪುರಾಣ ಪ್ರವಚನದ ಮುಕ್ತಾಯ ಸಮಾರಂಭವನ್ನು ಅಲ್ಲಿ ತುಂಬಾ ಅದ್ದೂರಿ ರೀತಿಯಲ್ಲಿ ವ್ಯವಸ್ಥೆಗೊಳಿಸಿದ್ದರು. ಬಹು ದೊಡ್ಡ ಪ್ರಮಾಣದಲ್ಲಿ ಅದು ನೆರವೇರಿತು. ವಿವಿಧ ವಿಷಯಗಳನ್ನು ಕುರಿತಂತೆ ಹಲವಾರು ವಿದ್ವಾಂಸರ ಗೋಷ್ಠಿಗಳನ್ನು ಏರ್ಪಡಿಸಲಾಗಿತ್ತು. ಪರಮಪೂಜ್ಯ ಶ್ರೀ ಸಿದ್ಧಗಂಗಾ ಸ್ವಾಮಿಗಳ ಸಾನ್ನಿಧ್ಯದಲ್ಲಿ ನಡೆದ ಒಂದು ಗೋಷ್ಠಿಯಲ್ಲಿ ನಾನೂ ಒಬ್ಬ ಉಪನ್ಯಾಸಕನಾಗಿದ್ದೆ. ನನ್ನ ಉಪನ್ಯಾಸದ ಮಧ್ಯೆ, ಒಂದು ಸಂದರ್ಭದಲ್ಲಿ ಕಾಯಕದ ಪ್ರಸ್ತಾಪ ಬಂದಾಗ ನಾನು "ಕಾಯಕವೆ ಕೈಲಾಸ" ಎಂಬ ಮಾತು ಬಸವಣ್ಣನವರದೆಂದು ಸಾಮಾನ್ಯವಾಗಿ ಎಲ್ಲರೂ ಹೇಳುತ್ತಾರೆ. ಆದರೆ ನನಗೆ ತಿಳಿದಂತೆ ಬಸವಣ್ಣನವರ ಯಾವುದೇ ವಚನದಲ್ಲಿ 'ಕಾಯಕವೇ ಕೈಲಾಸ' ಎಂಬ ನಿರ್ದಿಷ್ಟ ಪದ ಪ್ರಯೋಗ ಕಂಡುಬರುವುದಿಲ್ಲ. ಅದು ಬರುವುದು ಆಯ್ದಕ್ಕಿ ಮಾರಯ್ಯನ

*"ಕಾಯಕದಲ್ಲಿ ನಿರತನಾದರೆ ಗುರುದರ್ಶನವಾದಡೂ ಮರೆಯಬೇಕು*
*ಲಿಂಗಪೂಜೆಯಾದಡೂ ಮರೆಯಬೇಕು*
*ಜಂಗಮ ಮುಂದೆ ನಿಂದಿದ್ದಡೂ ಹಂಗ ಹರಿಯಬೇಕು*
*ಕಾಯಕವೆ ಕೈಲಾಸವಾದ ಕಾರಣ*
*ಅಮರೇಶ್ವರಲಿಂಗವಾಯಿತ್ತಾದರೂ ಕಾಯಕದೊಳಗು".*

ಎಂಬ ವಚನದಲ್ಲಿ, ಎಂದು ಹೇಳುವ ಜೊತೆಗೆ, ಶ್ರೀ ಸಾಮಾನ್ಯರಲ್ಲಿ ಏನಕೇನ ಕಾರಣಗಳಿಂದ ಮನೆ ಮಾಡಿಕೊಂಡಿರುವ ಅಜ್ಞಾನ, ಮೂಢನಂಬಿಕೆ ಮತ್ತು ಅರ್ಥಹೀನ ಸಂಪ್ರದಾಯಗಳ ಆಚರಣೆ, ಇತ್ಯಾದಿಗಳನ್ನು ಹೋಗಲಾಡಿಸಲು ಇಂತಹ ಪುರಾಣ ಪ್ರವಚನಗಳು ಒಳ್ಳೆಯ ಅವಕಾಶವನ್ನು ಒದಗಿಸಿಕೊಡುತ್ತವೆ. ಆದುದರಿಂದ ಸ್ವಾಮಿಗಳು, ಪುರಾಣಿಕರು, ಶಾಸ್ತ್ರಿಗಳು, ಪ್ರವಚನಕಾರರು ಇಂತಹ ಅವಕಾಶಗಳನ್ನು ಸದುಪಯೋಗಪಡಿಸಿಕೊಳ್ಳಬೇಕೆಂಬ ಮಾತನ್ನೂ ಸೇರಿಸಿದೆ.

ಇಂತಹ ನನ್ನ ಮಾತಿನ ಮರೆಯಲ್ಲಿದ್ದ ವೈಚಾರಿಕತೆ ಪ್ರಾಯಃ ಪೂಜ್ಯರ ಚಿತ್ತಕ್ಕೆ ಒಪ್ಪಿತವಾದಂತೆ ತೋರುತ್ತದೆ. ಎಂತಲೇ, ಉಪನ್ಯಾಸದ ನಂತರ ನಾನು ಸ್ವಾಮಿಗಳವರ ಪಾದಕ್ಕೆ ನಮಸ್ಕರಿಸಿದಾಗ ಅವರು ತಮ್ಮ ಸಂತೋಷವನ್ನು ನನ್ನ ಬೆನ್ನು ತಟ್ಟಿ ವ್ಯಕ್ತಪಡಿಸಿದರು. ಆಗ ನನ್ನಲ್ಲಿ ಹೇಳಲಾಗದಂತಹ ಏನೋ ಒಂದು ಬಗೆಯ ಭಾವವಿಶೇಷ ಉಂಟಾದುದನ್ನು ನಾನು ಎಂದಿಗೂ ಮರೆಯಲಾರೆ. ಆಗ ಅವರ ಪಳಪಳನೆ ಹೊಳೆಯುತ್ತಿದ್ದ ಕಣ್ಣುಗಳಲ್ಲಿ ವೀರವಿರಕ್ತಿ, ಮುಖದಲ್ಲಿ ಲಾಸ್ಯವಾಡುತ್ತಿದ್ದ ಲಿಂಗನಿಷ್ಠಾರೂಪದ ತಪಶ್ಶಕ್ತಿ – ಇವೆರಡೂ ನನ್ನನ್ನು ಮಂತ್ರ ಮುಗ್ಧವಾಗಿಸಿದವು. ಪೂಜ್ಯರ ಗುಣಗ್ರಾಹಕತ್ವಕ್ಕೆ ಇದೊಂದು ಸ್ಪಷ್ಟ ನಿದರ್ಶನವೆಂದು ಹೇಳಬಹುದು.

ಪೂಜ್ಯರ ಆ ಗುಣಗ್ರಾಹಕತ್ವ, ಮುಂದೆ ಕೆಲವೇ ದಿನಗಳಲ್ಲಿ ನನಗೆ ಸಂಬಂಧಿಸಿದಂತೆ ಪ್ರಕಟಗೊಂಡುದೂ ಉಂಟು. ಅವರ ಶ್ರೀಮಠ ಯಾವುದೋ ಒಂದು ಕಾರ್ಯಕ್ರಮದಲ್ಲಿ ಉಪನ್ಯಾಸ ನೀಡುವಂತೆ ನನಗೆ ಆಮಂತ್ರಣ ಬಂದಿತು. ಪ್ರಾಯಃ ಅದು ಪೂಜ್ಯ ಬುದ್ಧಿಯವರ ಸೂಚನೆಯ ಮೇರೆಗೆ ಅಲ್ಲಿಯ ಕಾರ್ಯಕರ್ತರಿಂದ ಬಂದಿರಬೇಕೆಂದು ನನ್ನ ಅನಿಸಿಕೆ.

ಪೂಜ್ಯ ಶ್ರೀಗಳ ಸಾನ್ನಿಧ್ಯದಲ್ಲಿ ನಡೆದ ಆ ಉಪನ್ಯಾಸ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಪ್ರೊ. ಸಿದ್ಧಲಿಂಗಯ್ಯನವರು ವಹಿಸಿದ್ದಂತೆ ನನ್ನ ನೆನಪು. ಉಪನ್ಯಾಸ ಕಾರ್ಯಕ್ರಮ ಮುಕ್ತಾಯವಾದ ನಂತರ ನಾನು ಪ್ರಸಾದ ಸ್ವೀಕರಿಸಿ, ಪೂಜ್ಯರ ದರ್ಶನಾಶೀರ್ವಾದ ಪಡೆಯಲು ಹೋದೆ. ಅವರೂ ಲಿಂಗಪೂಜೆ, ಲಿಂಗ ಪ್ರಸಾದಾನಂತರ ತಮ್ಮ ಕೊಠಡಿಯ ಪುಣ್ಯಾಸನದಲ್ಲಿ ಮೂರ್ತಮಾಡಿದ್ದರು. ಅವರ ತೇಜಃಪುಂಜ ಕಣ್ಣುಗಳು, ನಿರ್ಮಲ ಭಸಿತ ಶೋಭಿತ ವಿಶಾಲವಾದ ಹಣೆ, ಪುಣ್ಯವೇ ಹಣ್ಣಾದಂತಿದ್ದ ಅವರ ಕಾಷಾಯಾವೃತಕಾಯ – ಇವ ನನ್ನನ್ನು ಕೆಲವು ಕ್ಷಣ ಬೆರಗುಗೊಳಿಸಿದು ನಿಜ. ಶ್ರೀಗಳವರ ಕಾಯ, ಪ್ರಸಾದಕಾಯ ವಾಗಿದ್ದಂತೆ ನನಗೆ ಅನಿಸದಿರಲಿಲ್ಲ.

ಶರಣ ಸಿದ್ಧಾಂತದ ಪ್ರಕಾರ ಪರಮಾತ್ಮ ಅಥವಾ ಪರಶಿವ ಪ್ರಸಾದ ಸ್ವರೂಪನಾದರೆ, ಜೀವಾತ್ಮ ಪದಾರ್ಥ ಸ್ವರೂಪ. ಆ ಜೀವಾತ್ಮ ಪ್ರಸಾದ ಸ್ವರೂಪದ ಪರಮಾತ್ಮನಲ್ಲಿ ಬೆರೆತು ಆನಂದಿಸಬೇಕಾದರೆ ಅವನೂ ಪ್ರಸಾದ ಸ್ವರೂಪನಾಗಬೇಕಾಗುತ್ತದೆ. ಸಾಧಕ ಸೇವಿಸುವ ಪದಾರ್ಥ, ಪ್ರಸಾದವಾಗಬೇಕಾದರೆ ಅದು ಲಿಂಗಾರ್ಪಿತವಾಗಬೇಕು. ಅದಕ್ಕಾಗಿಯೇ ಶರಣರು ಅರ್ಪಣ ಕ್ರಿಯೆಯನ್ನು ಷಟ್‌ಸ್ಥಲಾಚರಣೆಯಲ್ಲಿ ಅಳವಡಿಸಿದ್ದಾರೆ. ಷಟ್‌ಸ್ಥಲಾಚರಣೆಯಲ್ಲಿ ತಮ್ಮನ್ನು ಪೂರ್ಣಪ್ರಮಾಣದಲ್ಲಿ ತೊಡಗಿಸಿಕೊಂಡಿರುವುದರಿಂದಲೇ ಅವರ ಕಾಯ ಪ್ರಸಾದಕಾಯವಾಗಿದೆ. ಅದರ ಮುಂದಣ ಪ್ರಕಾಶಕಾಯತ್ವ ತದನಂತರದ ಆಕಾಶಕಾಯತ್ವಗಳ ಸಿದ್ಧಿಯತ್ತ ಸಾಧನೆ ನಡೆಸಿರುವವರೆಂದು ನನ್ನ ಅನಿಸಿಕೆ. ಹೀಗೆ ಶಿವಯೋಗ ಸಾಧನೆ ಮುಂದುವರಿಸಿರುವ ಶ್ರೀಗಳವರ **'ತ್ರಿವಿಧ ದಾಸೋಹ'**ವಂತೂ ಜನಜನಿತವಾಗಿದೆ. ಇಂತಹ ಅಪ್ರತಿಮ ಚರಿತರ ಸಮೀಪದರ್ಶನ, ತದನಂತರ ಆಗದಿರುವ ಕೊರಗು ನನ್ನದು.

ಆದರೆ ಪೂಜ್ಯರು ನೆರವೇರಿಸುತ್ತಿರುವ ಅಮೂಲ್ಯ ಸಮಾಜೋ ಧಾರ್ಮಿಕ ಕಾರ್ಯಗಳನ್ನು, ಜಾತಿ–ಮತ–ಪಂಥಗಳ ಬೇಧವಿಲ್ಲದೆ ಸಹಸ್ರಾರು ಬಡ ವಿದ್ಯಾರ್ಥಿಗಳಿಗೆ ನಡೆಸಿಕೊಂಡು ಬರುತ್ತಿರುವ ಅನ್ನದಾಸೋಹವನ್ನು ಜ್ಞಾನದ ವಿವಿಧ ಶಾಖೆಗಳ ಅಧ್ಯಯನ ಅಧ್ಯಾಪನಗಳಿಗಾಗಿ ಹಲವಾರು ವಿದ್ಯಾಸಂಸ್ಥೆಗಳನ್ನು ತೆರೆಯುವ ಮೂಲಕ ಮಾಡುತ್ತಿರುವ ವಿದ್ಯಾದಾನವನ್ನು, ಶ್ರೀಮಠದಲ್ಲಿ ಧರ್ಮ–ತತ್ತ್ವ–ಸಾಹಿತ್ಯ–ಸಂಸ್ಕೃತಿಗಳನ್ನು ಕುರಿತಂತೆ ವಿಚಾರ ಸಂಕಿರಣ, ಉಪನ್ಯಾಸ, ಪ್ರವಚನಗಳ ಮೂಲಕ ನಡೆಸುತ್ತಿರುವ ಜ್ಞಾನ ದಾಸೋಹವನ್ನು ಪತ್ರಿಕೆ, ಪುಸ್ತಕ, ಸಂಸ್ಮರಣ ಗ್ರಂಥಗಳಲ್ಲಿ ಓದಿ, ಟಿ.ವಿ.ಗಳಲ್ಲಿ ನೋಡಿ ನನ್ನ ಆ ಕೊರಗನ್ನು ಕಡಿಮೆ ಮಾಡಿಕೊಳ್ಳುತ್ತಿದ್ದೇನೆ. ಶ್ರೀಗಳವರ ವಿವಿಧ'ಮುಖ ಸಮಾಜೋಧಾರ್ಮಿಕ ಕಾರ್ಯಗಳನ್ನು ಗುರುತಿಸಿದ ಕರ್ನಾಟಕ ಸರಕಾರ 'ಕರ್ನಾಟಕ ರತ್ನ' ಪದವಿ ನೀಡಿ ಸನ್ಮಾನಿಸಿದೆ. ಅನೇಕ ಸಂಘ ಸಂಸ್ಥೆಗಳು ಪೂಜ್ಯರಿಗೆ ನೀಡುತ್ತಿರುವ ಗೌರವ–ಪ್ರಶಸ್ತಿಗಳಿಗೆ ಲೆಕ್ಕವೇ ಇಲ್ಲ – ಇವೆಲ್ಲ ಈಗಾಗಲೇ ದಾಖಲಾಗಿರುವ ಮತ್ತು ಬಹುಜನರು ತಿಳಿದಿರುವ ವಿಷಯಗಳು.

ಪೂಜ್ಯರ ನೇತೃತ್ವದಲ್ಲಿ ನಡೆಯುತ್ತಿರುವ ಪವಾಡ ಸದೃಶ ಸಮಾಜೋಧಾರ್ಮಿಕ ಕಾರ್ಯಗಳಿಗೆ ಅವರ ಈ ಆತ್ಮಶಕ್ತಿಯೆ ಮೂಲಸ್ರೋತ್ರ. ನನಗೆ ದೊರೆತ ಅವರ ಸಮೀಪದರ್ಶನದ ಕೆಲವೇ ಕೆಲವು ಪ್ರಸಂಗಗಳಲ್ಲಿ ನಾನು ಕಂಡುಂಡ ಅವರ ಆಧ್ಯಾತ್ಮಿಕ ಸಂಪತ್ತನ್ನು ಕಟ್ಟಿಕೊಡುವ ಒಂದು ಪ್ರಯತ್ನ ಪ್ರಸ್ತುತ ಲೇಖನ.

❑







# ಅಸಾಮಾನ್ಯ ವಿಭೂತಿಪುರುಷ

– **ಪ್ರೊ. ಕೆ.ಈ. ರಾಧಾಕೃಷ್ಣ**
ಖ್ಯಾತ ಅಂಕಣಕಾರರು, ಬೆಂಗಳೂರು.

**ಬಂ**ದವರಿಗೆಲ್ಲ ಊಟ. ಸಿದ್ಧಗಂಗೆಯ ಫೇಮಸ್ಸು ಬೂಂದಿ ಪಾಯಸ. ನಮ್ಮಲ್ಲಿ ಅನೇಕರಿಗೆ ಸಾ–ಮಾನ್ಯರ ಜತೆ, ಅದಕ್ಕೆಂತೇ ನಿರ್ಮಿಸಿದ ಕೊಪ್ಪಲುಗಳಲ್ಲಿ ಊಟಮಾಡಲು ಅಹಂಕಾರ ಒಪ್ಪದು. ಆದರೆ ಅಲ್ಲಿನ ಊಟವೇ ವಿಶೇಷ ರುಚಿ. 'ಊಹುಂ ಈ ಜನರ ಜತೆ ಊಟ ನಮಗಲ್ಲ' ಎಂದು ನಡೆದುಕೊಂಡ ಅನೇಕ 'ಇಗೋಗಿ'ಗಳಿಗೆ ಉಪವಾಸ! ಆದರೆ ನಿರಮ್ಮಳ ನಿಷ್ಕಲ್ಮಷ ಜನರಿಗೆ ಮೃಷ್ಟಾನ್ನ ಭೋಜನ–ಶ್ರೀಕೃಪೆ.

ಶತಾಯುಷಿಗಳು ನಮ್ಮಲ್ಲಿ ಅನೇಕರು. ಪುರೋಹಿತವರ್ಗ ಶತಮಾನಂ ಭವತಿ–ಶತಂ ಜೀವ:–ಶರದ: ಶತಮಾನವಂತ.' ಎಂದು ಮನದುಂಬಿ ಆಶೀರ್ವದಿಸುವ ಮಂತ್ರಗಳನ್ನು ಕೇಳಿದ್ದೇವೆ. ಮನುಷ್ಯ ಕಾಯಕ್ಕೆ ಸಕ್ರಿಯವಾಗಿ ಜೀವಂತವಾಗಿ ಬದುಕುವುದಕ್ಕೆ ನೂರು ವರ್ಷಗಳ ಸುಖ ಗಡುವು. ಅಂದರೆ ನೂರು ವರ್ಷಗಳು ಬದುಕಬೇಕಾದರೆ ಶರೀರ ಮತ್ತು ಶರೀರ ನಿಯಂತ್ರಕ ಮನಸ್ಸು. ಮನಸ್ಸನ್ನು ಹಿಡಿತದಲ್ಲಿಡಬಲ್ಲ ಬುದ್ಧಿ–ಈ ಮೂರನ್ನೂ ಸುಸ್ಥಿತಿಯಲ್ಲಿಡ ಬಲ್ಲ ಪ್ರಜ್ಞೆ ಇವುಗಳ ಒಟ್ಟು ಮೊತ್ತದ ಸರಕಿಗೆ, ಹುಳ, ಹುಪ್ಪಟೆ, ಬೀಳದಂತೆ ಆರೋಗ್ಯವಾಗಿಡಬೇಕು. ಈ ಆರೋಗ್ಯ ವನ್ನು ಬೇರೆಯಾರೂ 'ಇಡುವುದಿಲ್ಲ' ತಾವೇ 'ಇಟ್ಟುಕೊಳ್ಳ' ಬೇಕು.

ಸ್ವಾಮಿ ವಿವೇಕಾನಂದರು ಒಂದು ಮುಖ್ಯ ಮಾತು ಹೇಳುತ್ತಾರೆ, ಶರೀರದೊಳಗೆ ಬಿರುಕು ಬಿಟ್ಟರೇನೇ ಹೊರ ಜಗತ್ತಿನ ರೋಗಾಣುಗಳು ಒಳ ಹೋಗಲು ಸಾಧ್ಯ. ಶರೀರವನ್ನು ನಾವು ಬೇಕಾಬಿಟ್ಟಿ ಉಪಯೋಗಿಸಿ ಬಿರುಕುಗಳನ್ನು ಸೃಷ್ಟಿಮಾಡಿ ರೋಗಾಣುಗಳ ಸೈನ್ಯವನ್ನು ಒಳಗೆ ಆಮಂತ್ರಿಸಿಕೊಳ್ಳುತ್ತೇವೆ. ಒಂದು ಸಲ ಅವುಗಳು ಬಂದರೆ ಸಾಕು ಡೇರೆ ಒಳಗೆ **'ತಲೆ ಮಾತ್ರ ಇಡಲು ಜಾಗ ಕೊಡು'** ಎಂದ ಒಂಟೆಯ ಕಥೆ.

ಮತ್ತೆ ಈ ರೋಗಾಣುಗಳನ್ನು ಓಡಿಸಲು ಹರಸಾಹಸ ಮಾಡಬೇಕು. ಶರೀರದ ರೋಗಗಳಿಗೆ ಬೇಕಾದಷ್ಟು ಆಂಟಿ ಬಯೋಟಿಕ್ಸ್‌ಗಳುವೆ ನಿಜ. ಆದರೆ ಮನಸ್ಸಿನ ರೋಗಕ್ಕೆ ಸುಲಭ ಸಾಧ್ಯವಾಗಿ ಮದ್ದು ಸಿಗದು. ಬುದ್ಧಿಗೆ ರೋಗ ತಗುಲಿದರೆ ಆ ಶಿವಪ್ಪ ಕೂಡ ಕಾಯಲು ಅಸಮರ್ಥ. ಇವೆಲ್ಲ ರೋಗಗ್ರಸ್ತವಾದರೆ ಪ್ರಜ್ಞೆ ಆಕಾಶ ಸೇರಿತು. ಆರೋಗ್ಯವಂತ ಶತಾಯುಷಿಗಳಾಗಬೇಕಾದರೆ ನಮ್ಮಲ್ಲಿ ಎಲ್ಲೂ ಬಿರುಕುಗಳು ಬಾರದಂತೆ ನೋಡಿಕೊಳ್ಳಬೇಕು.

ಈ ಶತಾಯುಷದಲ್ಲಿ ೮೦ ವರ್ಷಕ್ಕಿಂತಲೂ ಜಾಸ್ತಿ ನಿರ್ಲಿಪ್ತ ಸ–ನ್ಯಾಸ. ಬದುಕಿನ ನ್ಯಾಸದಲ್ಲಿ ಅನೇಕರಿಗೆ ಏರು ಪೇರುಗಳಿದ್ದರೆ, ಇವರದ್ದು ಸ್ಥಿತಪ್ರಜ್ಞವೃತ್ತಿ–ಪ್ರವೃತ್ತಿ. ಕೃಷ್ಣನನ್ನು ಅರ್ಜುನ ಕೇಳುತ್ತಾನೆ. 'ಸ್ಥಿತ ಪ್ರಜ್ಞಸ್ಯ ಕಾ ಭಾಷಾ! ಸ್ಥಿತ ಪ್ರಜ್ಞನ ಭಾಷೆ ಯಾವುದು! ಇಲ್ಲಿ ಭಾಷೆ ಅಂದರೆ ನಾಲಿಗೆ ನುಡಿಯುವ ಲಾಂಗ್ವೇಜ್ ಮಾತ್ರ ಅಲ್ಲ. ಅದು ಒಟ್ಟು ವ್ಯಕ್ತಿತ್ವದ ಭಾಷೆ.

ಪರಮ ಪೂಜನೀಯ ಆದರ್ಶವೇ ಶರೀರದಲ್ಲಿ ಅವತರಿಸಿ ನಡೆದಾಡುವುದು ಈಗಿನ ಕಾಲದಲ್ಲೂ ವಿರಳವೇನಲ್ಲ. ಆದರೆ ಅಂತಹ ಆದರ್ಶ ಒಟ್ಟು ಸಮಾಜಪುರುಷನಾಗಿ ಜೀವಂತ ಜಂಗಮನಾಗಿ ನಡೆದಾಡುವುದು ಮಹಾನ್ ಸಂಗತಿ. ಅಂತಹ ಮಹಾನ್ ಪುರುಷರು ನಡೆದಾಡುವುದು ಮಹಾನ್ ಸಂಗತಿ. ಅಂತಹ ಮಹಾನ್ ಪುರುಷರು ಸಿದ್ಧಗಂಗೆಯ ಸಿದ್ಧಪುರುಷರು ಡಾ|| ಶ್ರೀ ಶ್ರೀ ಶಿವಕುಮಾರಸ್ವಾಮಿಗಳು. ಎಂಭತ್ತು ವರ್ಷಗಳ ದೀರ್ಘ ಸನ್ಯಾಸ. ಬೆಳಿಗ್ಗೆ ೨.೩೦ರಿಂದ ರಾತ್ರಿ ೧೧ ಗಂಟೆವರೆಗೆ ಕಾಯಕ–ದಾಸೋಹವ್ರತ. ಮುಂಜಾನೆ ಜಗತ್ತು ಇನ್ನೂ ಎಚ್ಚರವಾಗದಿದ್ದಾಗಲೇ ಜಾಗೃತ ಅವಸ್ಥೆಯಲ್ಲಿ ಶಿವನೊಡನೆ ಮಾತುಕತೆ. ಮನಸ್ಸಿಗೂ, ದೈವತ್ವಕ್ಕೂ ಸಂಬಂಧ ಸಿದ್ಧಿ, ಪೂಜೆ, ಈ ಸಮಯ ತೀರ ವ್ಯಯಕ್ತಿಕವಾದದ್ದು. ಬಳಿಕ ಲೋಕ ಸೇವೆ. ಏನಾದರೂ ತಪ್ಪೀತು. ಆದರೆ ಹತ್ತು ಸಾವಿರ ಮಂದಿ ವಿದ್ಯಾರ್ಥಿಗಳಿಗೆ ಯಾತ್ರಿಕರಿಗೆ ನಡೆಯುವ ಮೂರು ಹೊತ್ತಿನ ಅನ್ನ ವ್ರತ ತಪ್ಪದು.

ಅಲ್ಲಿಗೆ ಈ ತೆಳು ಶರೀರ ತೆರಳಿ ಅಡಿಗೆ ಮನೆಯ ಮೇಲ್ವಿಚಾರಣೆ ನಡೆಯಲೇಬೇಕು. ವಿದ್ಯಾರ್ಥಿಗಳು ಉಣ್ಣುವ ಸಮಯದಲ್ಲಿ ಅಲ್ಲಿ ಮೇಲ್ನೋಟ ನೋಡಬೇಕು. 'ಎಲ್ಲ ಸರಿಯಾಗಿದೆ' 'ವಿದ್ಯಾರ್ಥಿಗಳು ಹೊಟ್ಟೆ ತುಂಬ ಉಣ್ಣುತ್ತಾರೆ' ಅದೇ ಶಿವಪೂಜೆ. ಅಂದಹಾಗೆ ಈ ವಿದ್ಯಾರ್ಥಿ ಗಳು ಯಾರು ಎಲ್ಲಿನವರು–ಯಾವ ಜಾತಿ–ಯಾವ ಮತ–ಯಾವ ಧರ್ಮ' 'ಇವನಾರವ, ಇವನಾರವ, ಇವನಾರವ ಎನ್ನದಿರು–ಇವ ನಮ್ಮವ, ಇವನಮ್ಮವ' ಎನ್ನುತಿರು ಅನ್ನುವ ಬಸವತತ್ವವೇ ಶರೀರ ಹೊಂದಿ ನಡೆಯುವ ಕ್ರಮ.

ಮತ್ತೆ ಬೆಳಿಗ್ಗೆ, ಸಂಜೆ ಸಾಮೂಹಿಕ ಪ್ರಾರ್ಥನೆ, ಶಿಸ್ತು ಮತ್ತು ಮನಸ್ಸಿನ ಸಂಯಮಕ್ಕಾಗಿ. ಆ ವೇಳೆ ಶ್ರೀಶ್ರೀಗಳು ಖುದ್ದಾಗಿ ಕುಳಿತಾರು. ಪ್ರಾರ್ಥನೆಯಲ್ಲಿ ತಾವೂ ಬಾಗಿಯಾದರೂ ಆಗಾಗ ವಿದ್ಯಾರ್ಥಿಗಳಿಗೆ ಕಿವಿಮಾತು. *'ದೇಶ- ಸಮಾಜಸೇವೆ ಮಾಡಿ, ಕಾಯಕ ಮಾಡಿ-ದಾಸೋಹ ಮಾಡಿ, ಒಳ್ಳೆಯವರಾಗಿ ಸಮಾಜವನ್ನು ಪ್ರೀತಿಸಿ'.*

ಜನಕ್ಕೆ ಉಣಬಡಿಸುವ ಧಾನ್ಯಗಳನ್ನು ಬೆಳೆಯುವವ ರಾರು? 'ಎಲ್ಲಾ ಆಗುತ್ತೆ-ಶ್ರೀವಾಣಿ'. ಶ್ರೀಮಠದ ಖಜಾನೆಯಲ್ಲಿ ಹಣಕ್ಕೆ ಕೊರತೆ ಇದ್ದೀತು. ಆದರೆ ಕಣಜದಲ್ಲಿ ಕಾಳು ಖಾಲಿಯಾಗದಂತೆ ಶ್ರೀಗಳು ಜೋಳಿಗೆ ಹಿಡಿದಾರು. **'ಪವಾಡ ಅತಿಮಾನುಷ'** ಪರಿಕ್ರಮಗಳಿಗೆ ಇಲ್ಲಿ ಜಾಗವಿಲ್ಲ. ಶುದ್ಧ ಮನುಷ್ಯ ಸೇವೆ. ಎಲ್ಲವೂ ಕ್ಲೀನ್.

೧೯೦೧ನೇ ಏಪ್ರಿಲ್ ೧ರಂದು ಸ್ವಾಮೀಜಿಯ ಜನನ. ಮಾಗಡಿ ತಾಲ್ಲೂಕಿನ ಒಂದು ಪುಟ್ಟಹಳ್ಳಿಯಲ್ಲಿ ಜನನ. ಉಳಿದ ಮಕ್ಕಳಿಗಿಂತ ಈ ಹುಡುಗ ಬುದ್ಧಿವಂತ. ಪ್ರತಿಷ್ಠಿತ ಸೆಂಟ್ರಲ್ ಕಾಲೇಜಿನಲ್ಲಿ ವಿಜ್ಞಾನದ ಪದವಿ ಅಭ್ಯಾಸ. ಇಂಗ್ಲೀಷ್, ಸಂಸ್ಕೃತ, ಕನ್ನಡ ಭಾಷೆಗಳಲ್ಲಿ ಪಾಂಡಿತ್ಯ. ಎಲ್ಲ ಅಪ್ಪ ಅಮ್ಮಂದಿರಂತೆ ಮಗ ಓದಿ ದೊಡ್ಡ 'ಕೆಲಸ'ಕ್ಕೆ ಸೇರಲಿ, ಕೈತುಂಬ ಸಂಪಾದಿಸುವುದಲ್ಲದೆ ಸಮಾಜದಲ್ಲಿ 'ಗಣ್ಯ'ರಾಗಬೇಕು ಇದು ಅವರ ಆಸೆ. ಆದರೆ ಈ ಯುವಕ ನನ್ನು ಕೈಬೀಸಿ ಕರೆಯುತ್ತಿದ್ದದ್ದು ಸಿದ್ಧಗಂಗೆಯ ಸಿರಿಬೆಟ್ಟ, ಉದ್ದಾನಪ್ಪ ಶ್ರೀಗಳು ಅವರಿಂದ ಸ್ವ ಆತ್ಮದ ಪರಿಚಯ, ಅದರ ಫಲವಾಗಿ ೧೯೩೦ರಲ್ಲಿ ಸನ್ಯಾಸ ದೀಕ್ಷೆ 'ದೊಡ್ಡ ಕುಟುಂಬಕ್ಕೆ' ಸೇರ್ಪಡೆ-ದೊಡ್ಡ ಕುಟುಂಬದ ನಿರ್ಮಾಣ.

ಒಂದೇ ಎರಡೇ, ೧೨೨ ಶಿಕ್ಷಣ ಸಂಸ್ಥೆಗಳು, ಐದು ದಶಕಗಳಿಂದ ಶಿಕ್ಷಣಕ್ರಾಂತಿ. ಮಹಾತ್ಮಾಗಾಂಧೀಜಿಯವರ ಮಾತು. ಹಳ್ಳಿಗಳು ಉದ್ಧಾರವಾಗಬೇಕಾದರೆ ಹಳ್ಳಿಗರು ಶಿಕ್ಷಿತರಾಗಬೇಕು. ಕರ್ನಾಟಕದ ಕುಗ್ರಾಮಗಳಲ್ಲಿ ಪ್ರವಾಸ. 'ಶಿಕ್ಷಣ ಕೊಡುತ್ತೇನೆ ಬನ್ನಿ' ಅವುಂತ್ರಣ. ದೇಶವನ್ನು ಕಾಡುವ ಜಾತಿಯು ಪಿಡುಗು ನಾಶವಾಗಬೇಕಾದರೆ ಎಲ್ಲಾ ಜಾತಿ ಯವರೂ ಒಟ್ಟಾಗಿ ಉಣ್ಣಬೇಕು- ಕಲಿಯಬೇಕು-ಬದುಕ ಬೇಕು. ಅಕ್ಷರ-ಅನ್ನ-ಆಸರೆಯೇ ಮಂತ್ರಗಳು. ಸ್ವಾತಂತ್ರ ಬಂದಾಗ ದೇಶಕಟ್ಟಲು ಶಿಕ್ಷಿತ ತರುಣರು ಬೇಕಲ್ಲ ಅದರ ನಿರ್ಮಾಣ.

ಡಾ॥ ಶ್ರೀ ಶ್ರೀ ಶಿವಕುಮಾರಸ್ವಾಮಿಯವರ ಜೀವನ ವ್ರತ ಇದು. ನಿಷ್ಕಲ್ಮಷ ಮುಗ್ಧ ಶಿಶು ಮನಸ್ಸು. ಉಪದ್ವಾಪ ರಹಿತ ಮನಸ್ಸು. ಸಮಕಾಲೀನ ಅನುಭವ ಮಂಟಪದ ಸ್ಥಾಪನೆ. ಇಂತಹ ಶ್ರೀಗಳು ೧೦೫ ಸಂವತ್ಸರಗಳನ್ನು ನಡೆದುಕೊಂಡೇ ಬಂದಿದ್ದಾರೆ. ಏಕಾಂಗಿ ಆದರೆ ಸಮಾಜಪುರುಷ, ವಿರಾಟ್‌ಪುರುಷ. ❑

## ಶ್ರೀವಾಣಿ

*ಒಬ್ಬ ವ್ಯಕ್ತಿಯ ಜೀವನದಲ್ಲಿ ಪ್ರಧಾನವಾದ ಮೂಲಭೂತವಾದ ಪ್ರಭಾವವನ್ನು ಬೀರುವುದು ಆತನು ವಾಸವಾಗಿರುವ ಕುಟುಂಬ. ಈ ಸಾಮಾಜಿಕ ಸಂಸ್ಥೆಯ ನಂತರ ಗೋಚರವಾಗುವ ಅತ್ಯಂತ ಪ್ರಭಾವಶಾಲೀ ಸಂಸ್ಥೆ ವ್ಯಕ್ತಿ ಅಭ್ಯಾಸಮಾಡುವ ವಿದ್ಯಾ ಕೇಂದ್ರ. ಆ ವ್ಯಕ್ತಿ ತಾನು ಕಲಿತ ವಿದ್ಯಾಸಂಸ್ಥೆಗೂ ತನಗೂ ಒಂದು ವಿಶಿಷ್ಟವಾದ ಸಂಬಂಧವನ್ನು ಬೆಳಸಿಕೊಂಡಿರುತ್ತಾನೆ. ಅದು ತನ್ನದು-ತಾನು ಅದಕ್ಕೆ ಸೇರಿದವನೆಂಬ ಭಾವನೆಯು ರೂಢಿಮೂಲವಾಗಿ ಬೆಳೆದುಬರುತ್ತದೆ. ಈ ಒಂದು ಪವಿತ್ರಭಾವನೆಯೂ, ವಿಶೇಷ ಸಂಬಂಧವೂ ಕೇವಲ ಆ ವ್ಯಕ್ತಿಯ ಆ ಸಂಸ್ಥೆಯಲ್ಲಿರುವವರೆಗೆ ಮಾತ್ರ ಅಸ್ತಿತ್ವದಲ್ಲಿರುತ್ತದೆಂದು ಭಾವಿಸುವುದು ತಪ್ಪಾಗುತ್ತದೆ. ಆತನು ಆ ಸಂಸ್ಥೆಯನ್ನು ಬಿಟ್ಟನಂತರವೂ ಈ ಸದ್ಭಾವನೆ ಸುಸಂಬಂಧ ಗಳು ಅವಿಚ್ಛಿನ್ನವಾಗಿ ಮುಂದುವರೆಯುತ್ತವೆ. ಅಲ್ಲಿ ತಾನು ಕಲಿತ ವಿಚಾರಗಳನ್ನು ದಾರಿಯ ಬುತ್ತಿಯಂತೆ ತನ್ನ ಜೀವನದುದ್ದಕ್ಕೂ ಬಳಸಿಕೊಳ್ಳುತ್ತಾನೆ. ಅವುಗಳನ್ನಾ ಧರಿಸಿಯೇ ತನ್ನ ಭವಿಷ್ಯವನ್ನು ರೂಪಿಸಿಕೊಳ್ಳುತ್ತಾನೆ. ಹಂತಹಂತದಲ್ಲಿ, ಅಡಿಗಡಿಗೆ ಅಲ್ಲಿ ತಾನು ಪಡೆದ ಜ್ಞಾನವು ಸ್ಮರಣೆಗೆ ಬರುತ್ತದೆ; ಒದಗಿಬರುವ ಎಡರು ತೊಡರುಗಳನ್ನು ಪರಿಹರಿಸುತ್ತದೆ. ಇದಕ್ಕಾಗಿ ಆ ಸಂಸ್ಥೆಗೆ ಕೃತಜ್ಞನಾಗಿರುತ್ತಾನೆ. ನೈಜವಾದ ಆಡಂಬರವಿಲ್ಲದ ಈ ಕೃತಜ್ಞತೆಯನ್ನು ಮಾತ್ರ ಯಾವೊಂದು ವಿದ್ಯಾಸಂಸ್ಥೆಯು ಅಲ್ಲಿನ ಹಳೆಯ ವಿದ್ಯಾರ್ಥಿಗಳಿಂದ ಅಪೇಕ್ಷಿಪಡುವುದು. ಅಲ್ಲಿಂದ ಹೊರಬಂದವರು ತಮ್ಮ ವ್ಯಕ್ತಿತ್ವವನ್ನು ಸಂಪೂರ್ಣವಾಗಿ ರೂಪಿಸಿಕೊಂಡು ಯಾವುದೇ ಸಂದರ್ಭದಲ್ಲಿಯೂ ಪರಾವಲಂಬಿಗಳಾಗದೆ, 'ಕಾಯಕವೇ ಕೈಲಾಸ' ವೆಂಬ ದಿವ್ಯಮಂತ್ರವನ್ನು ಜಪಿಸುತ್ತಾ ಕಾಯಕ ನಿಷ್ಠರಾಗಿ ತಮ್ಮ ತಮ್ಮ ಕರ್ತವ್ಯಗಳನ್ನು ಶ್ರದ್ಧಾಸಕ್ತಿಗಳಿಂದ ನಿರ್ವಹಿಸುತ್ತಿದ್ದು ಸಮಾಜಸೇವೆ ಸಲ್ಲಿಸುತ್ತಿರುವವರಾದರೆ ಆ ತಾಯಿ ಸಂಸ್ಥೆ ಸಂತೋಷ ಹೊಂದುತ್ತದೆ. ಸಾರ್ಥಕತೆಯ ಉಸಿರಾಡುತ್ತದೆ. ಇತ್ಯೋಪ್ಯತಿಶಯವಾದ ಸೇವೆ ಸಲ್ಲಿಸಬೇಕೆಂಬ ಆಶೋತ್ತರಗಳನ್ನು ಹೊಂದಿ ಸಾಧಿಸಲು ಶ್ರಮಿಸುತ್ತದೆ. ಅಧಿಕ ಸಂಖ್ಯೆಯಲ್ಲಿ ಜೀವನಜ್ಯೋತಿಗಳನ್ನು ಬೆಳಸಲು ತಾನು ಪ್ರಯತ್ನಿಸುತ್ತದೆ.*

RNI No. 17139/69

"Siddaganga" Monthly - Postal Reg. No. KA/SK/TMR/385/2009-11

# ಏಪ್ರಿಲ್ 28 ರಂದು ನಡೆದ ಗುರುವಂದನಾ ಸಮಾರಂಭದ ಆಯ್ದ ಚಿತ್ರಗಳು-2012








































Cover printed at : Geetanjali Graphics, B-71, KSSIDC Indl. Area, 6th Block, Rajajinagar, Bengaluru 10. Ph : 23404232